# ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧನಾ ವಿದ್ಯಾರ್ಥಿನಿ

**ವೇದಾವತಿ ಎಂ.**

REG NO:KUAH/೦೦೫೨೪

ಮಾರ್ಗದರ್ಶಕರು

**ಡಾ.ಸಿ.ಎಸ್.ವಾಸುದೇವನ್**

ಸಹ ಪ್ರಾಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೨-೧೩

# ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧನಾ ವಿದ್ಯಾರ್ಥಿನಿ

**ವೇದಾವತಿ ಎಂ.**

**REG NO:KUAH/00524**

ಮಾರ್ಗದರ್ಶಕರು

**ಡಾ.ಸಿ.ಎಸ್.ವಾಸುದೇವನ್**

ಸಹ ಪ್ರಾಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬


೨೦೧೩

## ಮಾರ್ಗದರ್ಶಕರ ಪ್ರಮಾಣ ಪತ್ರ

**ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ **ವೇದಾವತಿ ಎಂ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರು ವುದಿಲ್ಲವೆಂದು ದೃಢೀಕರಿಸುತ್ತೇನೆ.

C. S. Vasudevan

**ಡಾ. ಸಿ.ಎಸ್.ವಾಸುದೇವನ್**
ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ಸ್ಥಳ: ವಿದ್ಯಾರಣ್ಯ
ದಿನಾಂಕ: 20 · 8 · 2013

# ಘೋಷಣಾ ಪತ್ರ

**ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ** ಎಂಬ ಸಂಪ್ರಬಂಧವನ್ನು **ಡಾ. ಸಿ.ಎಸ್.ವಾಸುದೇವನ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

Vedavathi. M.


**ವೇದಾವತಿ ಎಂ.**
ಸಂಶೋಧನಾ ವಿದ್ಯಾರ್ಥಿನಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬


ಸ್ಥಳ: ವಿದ್ಯಾರಣ್ಯ
ದಿನಾಂಕ: ೨೦/೦೨/13

# ಪರಿವಿಡಿ


**ಅಧ್ಯಾಯ ೧ : ಪ್ರಸ್ತಾವನೆ** ೧–೧೧

೧.೧. ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

೧.೨. ಈವರೆಗಿನ ಅಧ್ಯಯನದ ಸಮೀಕ್ಷೆ ಮತ್ತು ವಿಧಾನ

**ಅಧ್ಯಾಯ ೨ : ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ** ೧೨–೨೭

೨.೧. ಭೌಗೋಳಿಕ ಹಿನ್ನೆಲೆ

೨.೨. ಚರಿತ್ರೆ

**ಅಧ್ಯಾಯ ೩ : ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ** ೨೮–೭೯

೩.೧. ದೇವಾಲಯಗಳು

೩.೨. ಶಿಲ್ಪಗಳು

೩.೩. ಶಾಸನಗಳು

೩.೪. ಇತರೆ ಅವಶೇಷಗಳು

**ಅಧ್ಯಾಯ ೪ : ಸಮಾಜ ಮತ್ತು ವ್ಯವಸ್ಥೆ** ೮೦–೧೦೨

೪.೧. ಸಾಮಾಜಿಕ ವ್ಯವಸ್ಥೆ

೪.೨. ಧಾರ್ಮಿಕ ವ್ಯವಸ್ಥೆ

೪.೩. ಆರ್ಥಿಕ ವ್ಯವಸ್ಥೆ

**ಅಧ್ಯಾಯ ೫ : ನಂಬಿಕೆ ಮತ್ತು ಆಚರಣೆಗಳು** ೧೦೩–೧೨೦

೫.೧. ನಂಬಿಕೆ ಆಚರಣೆಗಳು ಮತ್ತು ಐತಿಹ್ಯ

೫.೨. ಹಬ್ಬಗಳು, ಜಾತ್ರೆಗಳು ಮತ್ತು ಉತ್ಸವಗಳು

**ಅಧ್ಯಾಯ ೬ : ಸಮಾರೋಪ** ೧೨೧–೧೨೬

**ಅನುಬಂಧಗಳು** ೧೨೭–೧೪೫

೧. ಗ್ರಂಥಋಣ

೨. ವಕ್ತೃಗಳ ವಿವರ

೩. ನಕ್ಷೆಗಳು

೪. ತಲನಕ್ಷೆಗಳು

೫. ಛಾಯಾಚಿತ್ರಗಳು

# ಅಧ್ಯಾಯ ಒಂದು

## ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

೧.೨. ಈವರೆಗಿನ ಅಧ್ಯಯನ ಸಮೀಕ್ಷೆ ಮತ್ತು ವಿಧಾನ

# ಅಧ್ಯಾಯ ಒಂದು

## ಪ್ರಸ್ತಾವನೆ

ಮಾನವ ಸಂಘಜೀವಿ. ಅವನು ಏಕಾಂಗಿಯಾಗಿ ಬದುಕಲಾರ. ಆದ್ದರಿಂದ ಇತರರೊಂದಿಗಿನ ಒಡನಾಟಕ್ಕಾಗಿ ಹಾಗೂ ತನ್ನ ಅಸಂಖ್ಯಾತ ಚಟುವಟಿಕೆಗಳಿಗಾಗಿ ಒಂದು ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದಾನೆ. ಹೀಗೆ ರೂಪಿತವಾದ ಅಭೌತಿಕ ಸ್ವರೂಪದ ವ್ಯವಸ್ಥೆಯೇ ಸಮಾಜ. ಇಂತಹ ಸಮಾಜವನ್ನು ತನ್ನ ಬೌದ್ಧಿಕ ಶಕ್ತಿಯಿಂದ, ಸಂಘಟನಾ ಚತುರತೆಯಿಂದ ಮತ್ತು ಸತತ ಪ್ರಯತ್ನಶೀಲತೆಯಿಂದ ರೂಪಿಸಿಕೊಂಡ ಮಾನವನ ದೀರ್ಘಕಾಲದ ಪ್ರಯತ್ನದ ಕಥೆಯೇ ಚರಿತ್ರೆ. ಆ ಪ್ರಯತ್ನದಲ್ಲಿ ಅವನು ಸೃಷ್ಟಿಸಿಕೊಂಡಿದ್ದೆಲ್ಲವೂ ಸಂಸ್ಕೃತಿ. ಸಮಾಜದ ಸದಸ್ಯನಾಗಿ ಅವನು ಕಲಿತದ್ದೆಲ್ಲವೂ ಸಾಧಿಸಿದ್ದೆಲ್ಲವೂ ಸಾಮಾಜಿಕವಾದುದು. ಕಾಲದಿಂದ ಕಾಲಕ್ಕೆ ನಾನಾ ಬದಲಾವಣೆಗೆ ಮೈಯೊಡ್ಡಿ ಅನೇಕ ಐತಿಹಾಸಿಕ ತಿರುವುಗಳನ್ನು ಪಡೆಯುತ್ತಾ ಸಾಗಿರುವ ಮಾನವ ಸಮಾಜವು ವೈವಿಧ್ಯಮಯವೂ ವಿಭಿನ್ನವೂ ಆಗಿದ್ದು ವಿಶಿಷ್ಟ ಸಾಂಸ್ಕೃತಿಕ ಆಯಾಮವನ್ನು ಒಳಗೊಂಡಿರುತ್ತದೆ. ಹಾಗಾಗಿ ಮಾನವ ಸಮಾಜದ ಅಧ್ಯಯನವು ಕುತೂಹಲಕಾರಿಯಾದುದು.

ಇಡೀ ಜಗತ್ತು ಅಲಕ್ಷಿತ ಅಂಚುಗಳ ಕಡೆಗೆ ದೇಸೀ ಬೇರುಗಳ ಕಡೆಗೆ ಸ್ಥಳೀಯ ಸಂಸ್ಕೃತಿಗಳ ಜನ ಇತಿಹಾಸದ ಕಡೆಗೆ ಮುಖ ಮಾಡಿದೆ. ಒಂದು ಪ್ರದೇಶದ ವಿಶಿಷ್ಟ ಸಾಂಸ್ಕೃತಿಕ ಚರಿತ್ರೆಯನ್ನರಿಯುವ ಪ್ರಯತ್ನವಾಗಿ ಒಂದು ಚೌಕಟ್ಟನ್ನು ಸೃಷ್ಟಿಸಿಕೊಡುತ್ತದೆ ಸ್ಥಳೀಯ ಚರಿತ್ರೆ. 'ಸ್ಥಳೀಯತೆ' ಉದ್ಭವಿಸುವುದು ನಿರ್ದಿಷ್ಟ ನೆರೆಹೊರೆಯ ಸ್ಥಳೀಯ ಜನಪದ ಆಚರಣೆಗಳಿಂದ ಎಂಬುದನ್ನು ಒಪ್ಪಬೇಕಾಗುತ್ತದೆ. ಸ್ಥಳೀಯ ಚರಿತ್ರೆಯೆಂಬುದು ಒಂದು ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ ಹಿಂದೆ ಸಂಭವಿಸಿದ ಘಟನೆಗಳ ಅಥವಾ ಬದುಕಿ ಬಾಳಿದ ಜನಾಂಗಗಳ ಅಥವಾ ಸಮುದಾಯಗಳ ಅಧ್ಯಯನ.

ಎಲ್ಲ ಕಾಲಘಟ್ಟಗಳಲ್ಲಿಯ ಮನುಷ್ಯನ ಸ್ಥಿತಿ-ಗತಿಗಳ ಅಧ್ಯಯನ ಹಾಗೂ ಗತಕಾಲದ ಎಲ್ಲ ಆಗು-ಹೋಗುಗಳ ಬಗೆಗಿನ ಕಾರಣ, ಉದ್ದೇಶ ಹಾಗೂ ಪರಸ್ಪರ ಸಂಬಂಧಗಳನ್ನು ನಿಖರವಾಗಿ

ಅರಿತುಕೊಳ್ಳುವ ಪ್ರಯತ್ನ. ಇದು ತನ್ನದೇ ಆದ ಭೌಗೋಳಿಕ ಮಿತಿಗೊಳಪಟ್ಟರೂ ಸ್ಥಳೀಯ ಸಮುದಾಯಗಳ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಬೌದ್ಧಿಕ ಇತ್ಯಾದಿ ಸಂಗತಿಗಳ ವಿವರಗಳನ್ನು ಸಂಗ್ರಹಿಸಿ ಕೊಡುವ ವಿಪುಲ ಅವಕಾಶ ಅದಕ್ಕಿದೆ. ಇದು ಜನಸಮುದಾಯದಲ್ಲಿ ಉಳಿದುಕೊಂಡವರು ಹಾಗೂ ಯಾರು ಯಾವ ಕಾರಣಕ್ಕಾಗಿ ತೊರೆದು ಹೋದರೆಂಬುದರ ಅಧ್ಯಯನವೂ ಹೌದು. ಹಾಗೆಯೇ ಜನನಿಬಿಡ ತಾಣಗಳು ನಿರ್ಜನವಾದ ನಿಗೂಢ ಸಂಗತಿಗಳ ದಾಖಲೆಯಾಗಿಯೂ ಸ್ಥಳೀಯ ಚರಿತ್ರೆ ಮಾರ್ಪಡುತ್ತದೆ.[೧]

ಭಾರತೀಯ ಸಾಂಸ್ಕೃತಿಕ ಇತಿಹಾಸವನ್ನು ಪುನರ್‌ರಚಿಸುವ ನಿಟ್ಟಿನಲ್ಲಿ ಕರ್ನಾಟಕದ ಪಾತ್ರ ಅತಿ ಮಹತ್ವದ್ದಾಗಿದೆ. ಇತಿಹಾಸ ಪೂರ್ವಕಾಲದಿಂದ ತುಲನಾತ್ಮಕ ಅಧ್ಯಯನವನ್ನು ಮಾಡಿ ನೋಡಿದರೆ ಕರ್ನಾಟಕದಲ್ಲಿ ದೊರೆತ ಕುರುಹುಗಳು ಕರ್ನಾಟಕದಾದ್ಯಂತ ಹರಡಿದ್ದು ಇದು ಮಾನವನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ.

ಸಾಮ್ರಾಜ್ಯಗಳ ನಿರ್ಮಾಣ, ಅವುಗಳ ವ್ಯವಸ್ಥೆ ಧಾರ್ಮಿಕ ದೃಷ್ಟಿ, ಸಾಹಿತ್ಯಕ ಸೃಷ್ಟಿ, ಶಿಲ್ಪ, ಸಂಗೀತ ಹೀಗೆ ಎಲ್ಲಾ ರಂಗಗಳಲ್ಲಿಯೂ ಭಾರತೀಯ ಇತಿಹಾಸಕ್ಕೆ ಕರ್ನಾಟಕದ ಕೊಡುಗೆ ವೈಶಿಷ್ಟ್ಯಪೂರ್ಣವಾದುದು. ಸಂಸ್ಕೃತಿ ಅಥವಾ ಸಾಂಸ್ಕೃತಿಕ ಎಂದರೆ ರಾಜಕೀಯ, ಸಾಮಾಜಿಕ, ಆರ್ಥಿಕ ಎಲ್ಲಾ ರಂಗಗಳಲ್ಲಿಯೂ ಅವಿರತವಾಗಿ ಸಾಧಿಸಿದ ಪ್ರಗತಿ ಮತ್ತು ಇದರ ವಿಫಲತೆಗಳನ್ನು ಯಥಾವತ್ತಾಗಿ ನಿರೂಪಿಸುವುದೇ ಇತಿಹಾಸದ ಕಾರ್ಯವಾಗಿದ್ದು ಇದನ್ನೇ ಸಾಂಸ್ಕೃತಿಕ ಇತಿಹಾಸ ಎಂದರೆ ತಪ್ಪಾಗಲಿಕ್ಕಿಲ್ಲ.

ಒಂದು ನಾಡಿನ ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ರಚಿಸುವಾಗ ಆ ಪ್ರದೇಶದ ಅನ್ವೇಷಣೆ, ಶೋಧನೆ, ಸಂಗ್ರಹಣೆ ಮತ್ತು ಪ್ರಕರಣೆ ಗ್ರಾಮಗಳಿಂದ ಆರಂಭವಾಗಬೇಕು. ಈ ನಿಟ್ಟಿನಲ್ಲಿ **"ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಕಣಕಟ್ಟೆ ಹೋಬಳಿ"** ಕುರಿತು ಈವರೆಗೆ ವಸ್ತುನಿಷ್ಠವಾದ ಹಾಗೂ ಪ್ರತ್ಯೇಕವಾದ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು. ಶಾಸನ ಸಂಪತ್ತಿನಿಂದ ಕೂಡಿರುವ ಕಣಕಟ್ಟೆ ಹೋಬಳಿಯು ಇಲ್ಲಿ ಸಾಂಸ್ಕೃತಿಕ ಅಧ್ಯಯನಕ್ಕೆ ಒಳಗಾಗಿದೆ.[೨] ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಿಂದ ಈ ಪ್ರದೇಶ ವಿವಿಧ ರಾಜಮನೆತನಗಳ ಆಳ್ವಿಕೆಗೆ ಒಳಗಾಗಿತ್ತು ಎಂಬುದನ್ನು ತಿಳಿಯಬಹುದು. ಪ್ರಾಗೈತಿಹಾಸಿಕ ಕಾಲದಿಂದಲೂ ಕಣಕಟ್ಟೆ ಹೋಬಳಿ ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿದ್ದು ಸಮಕಾಲೀನ ಕಾಲಘಟ್ಟದಲ್ಲಿ ತನ್ನ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿದ್ದು ಸಂಸ್ಕೃತಿಯ ಪಳೆಯುಳಿಕೆಗಳನ್ನು ತನ್ನ ಒಡಲಲ್ಲಿ ತುಂಬಿಕೊಂಡಿದೆ. ಇಲ್ಲಿ ವಿವಿಧ ರಾಜಮನೆತನಗಳು ಆಳ್ವಿಕೆ ಮಾಡಿದ್ದು ಅಧ್ಯಯನದ ವ್ಯಾಪ್ತಿಯಲ್ಲಿ ಕಂಡುಬರುವ ಶಾಸನಗಳು, ದೇವಾಲಯಗಳು, ಮೂರ್ತಿಗಳು ಇಲ್ಲಿನ ಜನರ ನಂಬಿಕೆ, ಆಚಾರ ವಿಚಾರ, ಹಬ್ಬಗಳು, ಸಂಪ್ರದಾಯಗಳು, ಆಚರಣೆಗಳು, ಉತ್ಸವಗಳು, ಜಾತ್ರೆಗಳು ಮುಂತಾದ ಅಂಶಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿವೆ.

ಕಣಕಟ್ಟೆ ಹೋಬಳಿ ಪ್ರಾಚೀನ ಕಾಲದಿಂದಲೂ ವ್ಯಾಪಾರೀ ಕೇಂದ್ರವಾಗಿದ್ದು, ಐತಿಹಾಸಿಕ ಹೆಗ್ಗುರುತುಗಳನ್ನು ಸಂಸ್ಕೃತಿಯ ವೈವಿಧ್ಯತೆಗಳನ್ನು ಗರ್ಭೀಕರಿಸಿಕೊಂಡು ಬೆಳೆದುಬಂದಿದೆ. ಪ್ರಸ್ತುತ ಪ್ರದೇಶವು ಇತಿಹಾಸದುದ್ದಕ್ಕೂ ಎಷ್ಟರಮಟ್ಟಿಗೆ ಸಾಂಸ್ಕೃತಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಎಂಬುದನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತವಾಗಿ ಕಣಕಟ್ಟೆ ಹೋಬಳಿಯು ಹಾಸನ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ೮ ತಾಲ್ಲೂಕುಗಳಲ್ಲಿ ಒಂದಾದ ಅರಸೀಕೆರೆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುತ್ತದೆ. ಈ ತಾಲ್ಲೂಕಿನಲ್ಲಿ ಕಂಡುಬರುವ ೫ ಹೋಬಳಿಗಳಲ್ಲಿ ಕಣಕಟ್ಟೆಯು ಒಂದಾಗಿದೆ. ತಾಲ್ಲೂಕು ಕೇಂದ್ರದಿಂದ ಸುಮಾರು ೩೩ ಕಿ.ಮೀ. ದೂರದಲ್ಲಿದೆ. ಇದು ಉತ್ತರಕ್ಕೆ ಬೆಲಗೂರು, ಶ್ರೀರಾಂಪುರ, ದಕ್ಷಿಣಕ್ಕೆ ಅರಸೀಕೆರೆ, ಅಗ್ಗುಂದ, ಪೂರ್ವಕ್ಕೆ ಮತ್ತಿಘಟ್ಟ, ಹುಳಿಯಾರು, ಪಶ್ಚಿಮಕ್ಕೆ ಬಾಣಾವರ, ದೇವನೂರು ಪ್ರದೇಶಗಳ ಮೇರೆಗಳನ್ನು ತನ್ನ ಸುತ್ತಮುತ್ತಲೂ ಹೊಂದಿದೆ. ಈ ಹೋಬಳಿಯು ಒಟ್ಟು ೬೪ ಹಳ್ಳಿಗಳನ್ನು ಹೊಂದಿದ್ದು ದೊಡ್ಡಮೇಟಿಕುರ್ಕೆ, ಸಾತನಗೆರೆ, ಶಂಕರನಹಳ್ಳಿ, ಕಿತ್ತನೆಕರೆ, ನಾಗವೇದಿ, ಕಲ್ಲುಸಾದರಹಳ್ಳಿ, ರಾಂಪುರ, ಮಾಡಾಳು, ದಿಬ್ಬೂರು[೩] ಮುಂತಾದ ಗ್ರಾಮಗಳನ್ನು ಹೊಂದಿದೆ. ಹೀಗೆ ಒಂದು ಸೀಮಿತ ಪ್ರದೇಶವನ್ನು ಆಯ್ದುಕೊಂಡು ಸಾಂಸ್ಕೃತಿಕ ಚಹರೆಯ ವಿವಿಧ ಮಜಲುಗಳನ್ನು ಅಭ್ಯಸಿಸುವುದರ ಮೂಲಕ ಆ ಪ್ರದೇಶದ ಸಂಸ್ಕೃತಿಯನ್ನು ಪುನಃ ರಚಿಸಿ ಪ್ರಾಚೀನ ಸಾಂಸ್ಕೃತಿಕ ಪರಂಪರೆಯನ್ನು ಅರಿಯಲು **"ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯಡಿಯಲ್ಲಿ ವಸ್ತುನಿಷ್ಠ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ೧.೧. ಅಧ್ಯಯನದ ಉದ್ದೇಶ

ಸಾಮಾನ್ಯವಾಗಿ ಯಾವುದೇ ಒಂದು ಅಧ್ಯಯನವು ವಸ್ತುನಿಷ್ಠವಾಗಿ ನಡೆಯಬೇಕಾದರೆ ಅದು ತನ್ನದೇ ಆದ ನಿರ್ದಿಷ್ಟವಾದ ಉದ್ದೇಶವನ್ನು ಒಳಗೊಂಡಿರಬೇಕು. ನಿರ್ದಿಷ್ಟವಾದ ಉದ್ದೇಶವನ್ನು ಒಳಗೊಂಡಿಲ್ಲದಿದ್ದರೆ ಅದು ವಸ್ತುನಿಷ್ಠವಾದ ಅಧ್ಯಯನ ಎನಿಸುವುದಿಲ್ಲ. ಹಾಗೆಯೇ ಅಧ್ಯಯನದ ಉದ್ದೇಶವು ತನ್ನದೇ ಆದ ಗುರಿಯನ್ನು ಹೊಂದಿರಬೇಕು. ಗುರಿ ಎಂದರೆ ಅಲ್ಲಿ ಉದ್ಭವಿಸುವ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವುದು ಸಂಶೋಧನೆಯ ಉದ್ದೇಶವಾಗಿರುತ್ತದೆ. ಇದು ಯಾವಾಗಲೂ ಸಂಶೋಧನ ಕೆಲಸಕ್ಕೆ ಮಾರ್ಗಸೂಚಿಯಾಗಿ ಕಾರ್ಯ ನಿರ್ವಹಿಸುವಂತಿರಬೇಕು.

ಒಂದು ದೇಶದ ಇತಿಹಾಸವನ್ನು ಒಬ್ಬ ವ್ಯಕ್ತಿ ವಿವರವಾಗಿ ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯ. ಈ ಕಾರಣದಿಂದ ಸಂಸ್ಕೃತಿಯನ್ನು ಬಿಡಿ ಬಿಡಿಯಾಗಿ ತೋರಿಸುವ ನಿಟ್ಟಿನಲ್ಲಿ ಇತಿಹಾಸವನ್ನು ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಣೆ ಮಾಡಲಾಗಿದೆ. ಈ ನಿಟ್ಟಿನಲ್ಲಿ ಸ್ಥಳೀಯ ಚರಿತ್ರೆಯನ್ನು

ರಚಿಸುವಾಗ ಅಥವಾ ಅಧ್ಯಯನ ಕೈಗೊಳ್ಳುವಾಗ ಸಾಂಸ್ಕೃತಿಕ ದೃಷ್ಟಿಯಿಂದ ಕೈಗೊಳ್ಳುವುದು ಅತ್ಯಂತ ಉಪಯುಕ್ತವಾದುದು.

ಪ್ರಸ್ತುತ ಅಧ್ಯಯನದ ಶೀರ್ಷಿಕೆ ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ ಎನ್ನುವುದಾಗಿದ್ದು ಈ ಪರಿಸರದ ಒಟ್ಟಾರೆ ಸಾಂಸ್ಕೃತಿಕ ಸಂಗತಿಗಳನ್ನು ವ್ಯವಸ್ಥಿತವಾಗಿ ಕಟ್ಟಿಕೊಡುವ ಹಾಗೂ ಲಭ್ಯವಿರುವ ಆಧಾರಗಳ ಹಿನ್ನೆಲೆಯಲ್ಲಿ ಮರುವಿಮರ್ಶಿಸಲಾಗಿದೆ.

ಪ್ರಾಗೈತಿಹಾಸಿಕ ಹಾಗೂ ಐತಿಹಾಸಿಕ ದೃಷ್ಟಿಯಿಂದ ಅರಸೀಕೆರೆ ತಾಲ್ಲೂಕಿನ ಕಣಕಟ್ಟೆ ಹೋಬಳಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವು ಮಹತ್ವವಾದುದಾಗಿದೆ. ಈ ಪ್ರದೇಶದ ಭೌಗೋಳಿಕ ಸನ್ನಿವೇಶವನ್ನು ಗಮನದಲ್ಲಿರಿಸಿಕೊಂಡು ಈ ಪ್ರದೇಶದಲ್ಲಿ ಮಾನವನ ಚಟುವಟಿಕೆಗಳು, ಜೀವನ ಕ್ರಮ, ಪರಿಸರ ಇನ್ನೂ ಮುಂತಾದ ಹಲವಾರು ವಿಷಯಗಳನ್ನು ಅರಿಯುವುದು ಅಧ್ಯಯನದ ಉದ್ದೇಶವಾಗಿದೆ. ಹಾಗೆಯೇ ಒಂದು ಕಲೆಯು ಪ್ರವರ್ಧಮಾನಕ್ಕೆ ಬರಬೇಕಾದರೆ ಆಶ್ರಯದಾತರು ಅವಶ್ಯಕ, ಆಶ್ರಯದಾತರಿಲ್ಲದೆ ಯಾವುದೇ ಕಲಾ ಪ್ರಕಾರವು ವಿಕಾಸ ಹೊಂದಲು ಸಾದ್ಯವಿಲ್ಲ. ಪ್ರಾಚೀನ ಭಾರತದಲ್ಲಿ ಬಹುಪಾಲು ಕಲಾ ಪ್ರಕಾರಗಳು ಹುಟ್ಟಿಬೆಳೆದದ್ದು ರಾಜಾಶ್ರಯದಲ್ಲಿ. ಒಂದು ರಾಜ್ಯದ ನಿರ್ದಿಷ್ಟ ಅವಧಿಯ ಸಮೃದ್ಧತೆ, ಸ್ಥಿರತೆ, ಅರಸನಾದವನ ಕಲಾಭಿರುಚಿ ಇನ್ನೂ ಮೊದಲಾದವು ಆಯಾ ಕಾಲದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಪ್ರತಿಬಿಂಬಿಸುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಪ್ರಾಚೀನ ಹಾಗೂ ಮಧ್ಯಕಾಲೀನ ಯುಗದಲ್ಲಿ ತಲಕಾಡಿನ ಗಂಗರು, ಕಲ್ಯಾಣಿ ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರು ಮತ್ತು ಪಾಳೆಯಗಾರರು ಆಳ್ವಿಕೆ ನಡೆಸಿದ್ದು ಈ ಮನೆತನಗಳ ಕೊಡುಗೆಗಳ ಬಗ್ಗೆ ವಿವರಿಸುವ ಉದ್ದೇಶವನ್ನು ಹೊಂದಿದೆ.

ಸಮಾಜದ ಕೇಂದ್ರಬಿಂದುವಾಗಿ ತನ್ನ ಸುತ್ತ ನೂರಾರು ವಿಷಯಗಳನ್ನು ಹೆಣೆದುಕೊಂಡು ದೇವಾಲಯವಿಲ್ಲದೆ ಬದುಕೇ ಇಲ್ಲ ಎನ್ನುವಷ್ಟರಮಟ್ಟಿಗೆ ಕಾರ್ಯನಿರ್ವಹಿಸಿದ ದೇವಾಲಯಗಳು ಇಂದು ಆ ವೈಭವದ ಬದುಕಿಗೆ ಮೂಕ ಸಾಕ್ಷಿಯಾಗಿ ನಿಂತಿವೆ. ಬದಲಾದ ರಾಜಕೀಯ ಸನ್ನಿವೇಶ, ಪ್ರಕೃತಿ ವಿಕೋಪಕ್ಕೆ ಸಿಕ್ಕಿ ವಿನಾಶದ ಅಂಚಿನಲ್ಲಿರುವ ದೇವಾಲಯಗಳನ್ನು ನಾಶವಾಗುವ ಮುನ್ನ ದಾಖಲಿಸಿ ಮುಂದಿನ ಜನಾಂಗಕ್ಕೆ ಮಾದರಿಯಾಗಿಸುವ ಪ್ರಯತ್ನ ಮಾಡಲಾಗುವುದು. ಜೊತೆಗೆ ಕಣಕಟ್ಟೆ ಸುತ್ತಮುತ್ತಲಿನ ದೇವಾಲಯಗಳ ವಿವರಗಳನ್ನು ಒಂದೆಡೆ ಸಂಗ್ರಹಿಸಿ ಆ ಆಕರಗಳ ಆಧಾರದಲ್ಲಿ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳಲಾಗುವುದು. ದೇವಾಲಯಗಳು ಇದ್ದ ಮೇಲೆ ಅಲ್ಲಿ ಮೂರ್ತಿಶಿಲ್ಪ ಇರಲೇಬೇಕು. ಗುಡಿಗಳಲ್ಲಿ ಮೂರ್ತಿಪೂಜೆ ಮಾಡಿಕೊಂಡು ಬಂದಾಗಲೇ ವಾಸ್ತುಶಿಲ್ಪ, ಶಿಲ್ಪಶಾಸ್ತ್ರ, ವಿಗ್ರಹ ಪ್ರತಿಷ್ಠಾಪನಾ ವಿಧಿ, ಪೂಜಾವಿಧಿಗಳು ಹುಟ್ಟಿಕೊಂಡವು. ಶಿಲ್ಪಗಳು, ಸಮಕಾಲೀನ ಧಾರ್ಮಿಕ

ಸ್ಥಿತಿಗತಿಗಳು, ಆಚಾರ ವಿಚಾರಗಳು, ವಸ್ತ್ರಾಭರಣಗಳು ಮುಂತಾದವುಗಳನ್ನು ತಿಳಿಸುವುದಾಗಿದ್ದು ಅವುಗಳನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಚಾರಿತ್ರಿಕ ಯುಗಕ್ಕೆ ಸಂಬಂಧಿಸಿದಂತೆ ಚರಿತ್ರೆಯ ರಚನೆಗೆ ಶಾಸನಗಳು ಪ್ರಧಾನವಾದ ಆಕರಗಳಾಗಿವೆ. ಸಂಸ್ಕೃತಿಯ ಅರಿವಿನ ದೃಷ್ಟಿಯಿಂದ ಬಹಳ ಗಣ್ಯವಾಗಿವೆ. ಬರಹದ ರೂಪದಲ್ಲಿರುವ ಇತರ ಆಧಾರಗಳಿಗಿಂತ ಶಾಸನಾಧಾರ ಹೆಚ್ಚು ವಿಶ್ವಾಸಯೋಗ್ಯವೂ ಮೌಲಿಕವೂ ಆದುದು. ಪ್ರಾಚೀನ ಅರಸರು ಆಜ್ಞೆಯ ಮೂಲಕ ತಿಳಿಸುವ ಬರಹಗಳೇ ಶಾಸನಗಳಾಗಿದ್ದು, ಇತಿಹಾಸ ಪುನರ್‌ರಚನೆಯಲ್ಲಿ ಶಾಸನಗಳ ಪಾತ್ರ ಅತಿ ಪ್ರಮುಖವಾದುದು. ಅಂದಿನ ಕಾಲದ ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನಕ್ಕೆ ಶಾಸನಗಳೇ ಪ್ರಮುಖ ಆಧಾರವಾಗಿದ್ದು, ಸಾಂಸ್ಕೃತಿಕ ಮಜಲುಗಳನ್ನು ಪರಿಚಯಿಸುವ ವಸ್ತುನಿಷ್ಠ ದಾಖಲೆಗಳಾಗಿದ್ದು ಇವುಗಳ ಕುರಿತು ಅಧ್ಯಯನ ನಡೆಸುವುದು ಪ್ರಮುಖ ಉದ್ದೇಶವಾಗಿದೆ.

ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನವು ಅಲ್ಲಿಯ ಭೌಗೋಳಿಕ ಪರಿಸರ ಆಯಾ ಕಾಲದಲ್ಲಿ ಬಿಟ್ಟು ಹೋಗಿರುವ ಪ್ರಾಚೀನ ಅವಶೇಷಗಳು ಮತ್ತು ಅಲ್ಲಿ ನೆಲೆಸಿರುವ ಜನರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ಥಿತಿಗತಿಗಳು ಮತ್ತು ಕೊಡುಕೊಳ್ಳುವಿಕೆಗಳಿಂದ ಪ್ರಭಾವಿತವಾಗಿರುತ್ತದೆ. ಇವುಗಳು ವಿವಿಧ ಕಾಲಘಟ್ಟಗಳಲ್ಲಿ ಈ ಪರಿಸರದಲ್ಲಾದ ಅನೇಕ ಅಂಶಗಳ ಪರಿವರ್ತನೆಗೆ ಕಾರಣೀಭೂತವಾಗಿದ್ದು ಇವುಗಳ ಕುರಿತು ವಿವರವಾಗಿ ಚರ್ಚಿಸಲಾಗಿದೆ.

ಕಣಕಟ್ಟೆ ಪರಿಸರದಲ್ಲಿ ಇದುವರೆಗೆ ಲಭ್ಯವಿರುವ ಪ್ರಾಚೀನ ಅವಶೇಷಗಳ ಅಧ್ಯಯನದ ಜೊತೆಗೆ ಈ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಜನಸಾಮಾನ್ಯರ ಸಂದರ್ಶನಗಳ ಮೂಲಕ ಪ್ರಚಲಿತವಿರುವ ನಂಬಿಕೆಗಳು, ಆಚರಣೆಗಳು, ಐತಿಹ್ಯಗಳು, ಹಬ್ಬಗಳು ಮುಂತಾದವುಗಳನ್ನು ದಾಖಲಿಸಿಕೊಳ್ಳಲಾಗಿದೆ. ಹಾಗೆಯೇ ಸಂಗ್ರಹವಾದ ಸಂಪನ್ಮೂಲಗಳನ್ನು ವಿವೇಚಿಸುವ ಮೂಲಕ ಸಮಗ್ರವಾದ ಮತ್ತು ವಸ್ತುನಿಷ್ಠವಾದ ಇತಿಹಾಸ ಕಟ್ಟಿಕೊಡುವಂತಹ ಪ್ರಯತ್ನ ಮಾಡಲಾಗಿದೆ.

ಒಟ್ಟಾರೆಯಾಗಿ “ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ” ಎಂಬ ಶೀರ್ಷಿಕೆಗೆ ಅನುಗುಣವಾಗಿ ಇತಿಹಾಸದಲ್ಲಿ ಅಜ್ಞಾತವಾಗಿರುವ ಅಂಶಗಳನ್ನು ಸಾಂಸ್ಕೃತಿಕ ದೃಷ್ಟಿಕೋನದಲ್ಲಿ ಅವುಗಳನ್ನು ಬೆಳಕಿಗೆ ತರುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಸಾಮಾನ್ಯವಾಗಿ ಯಾವುದೇ ಒಂದು ಸಂಶೋಧನೆ ಸ್ಪಷ್ಟವಾಗಿ ಯಶಸ್ವಿಯಾಗಬೇಕಾದರೆ ಅದಕ್ಕೆ ಒಂದು ನಿರ್ದಿಷ್ಟವಾದ ಚೌಕಟ್ಟು ಅಂದರೆ ವ್ಯಾಪ್ತಿ ಇರುವುದು ಅತೀ ಮುಖ್ಯವಾದುದು.

ಪ್ರಸ್ತುತ ಅಧ್ಯಯನದ ಶೀರ್ಷಿಕೆಯೇ ಸೂಚಿಸುವಂತೆ (ಕಣಕಟ್ಟೆ ಹೋಬಳಿ ಪರಿಸರಕ್ಕೆ ಮಾತ್ರ ಸೀಮಿತವಾಗಿದೆ.) ಆದರೂ ಸಹ ಅವಶ್ಯಕತೆಗನುಗುಣವಾಗಿ ಈ ಪ್ರದೇಶದ ಸುತ್ತಮುತ್ತಲಿನ ಪುರಾತತ್ವ ಕುರುಹುಗಳನ್ನು ಪ್ರಾಸಂಗಿಕವಾಗಿ ಗಮನಿಸಲಾಗುವುದು. ಕಣಕಟ್ಟೆ ಹೋಬಳಿಯಲ್ಲಿ ಒಟ್ಟಾರೆ ೬೪ ಗ್ರಾಮಗಳು ಕಂಡುಬರುತ್ತವೆ. ಅಂತಹ ಗ್ರಾಮಗಳೆಂದರೆ ಕಣಕಟ್ಟೆ, ಶಂಕರನಹಳ್ಳಿ, ಚಿಕ್ಕಹಲ್ಲೂಕುರು, ಕಲ್ಗುಂಡಿ, ಕಲ್ಲುಸಾದರಹಳ್ಳಿ, ದೊಡ್ಡ ಮೇಟಿ ಕುರ್ಕೆ, ರಾಂಪುರ, ಹೊಳಲ್ಕೆರೆ, ಹಿರೇಸಾದರಹಳ್ಳಿ, ಜನ್ನಾವರ, ಮಾಗೇನಹಳ್ಳಿ, ಕುರುಬರಹಳ್ಳಿ, ನಾಗವೇದಿ, ಸಾತನಗೆರೆ, ಮಾಡಾಳು, ಸೋಮಶೆಟ್ಟಿಹಳ್ಳಿ, ಕಿತ್ತನಕೆರೆ, ಜಯಚಾಮರಾಜಪುರ, ಸೊಪ್ಪಿನಹಳ್ಳಿ, ಪಾಳ್ಯ, ಹಿರೇಕಲ್ಲು ಫಾರೆಸ್ಟ್, ಹೊನ್ನಕಟ್ಟ, ಯರೇಹಳ್ಳಿ, ಕೆ. ಕರಡಿಹಳ್ಳಿ, ಕಸವನಹಳ್ಳಿ, ಕ್ಯಾತನಹಳ್ಳಿ, ಕುಂಭಾಘಟ್ಟ, ಚಿಕ್ಕಮೇಟಿಕುರ್ಕೆ, ಮದ್ದರಹಳ್ಳಿ ಮುಂತಾದ ಪ್ರದೇಶಗಳಲ್ಲಿ ದೊರೆಯುವ ಆಕರಗಳು ಮತ್ತು ಸಂಗ್ರಹಿಸುವ ಮಾಹಿತಿಯಿಂದ ಸಾಂಸ್ಕೃತಿಕ ಮಹತ್ವವನ್ನು ಹೇಳುವ ಹಿನ್ನೆಲೆಯಲ್ಲಿ ಈ ಅಧ್ಯಯನ ಕೈಗೊಳ್ಳಲಾಗಿದೆ. ಜೊತೆಗೆ ವಿವಿಧ ರಾಜಮನೆತನಗಳು ಮತ್ತು ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು ಮತ್ತು ಕೆತ್ತಿಸಿರುವ ಶಾಸನಗಳು ಹಲವು ಕಂಡುಬರುತ್ತವೆ. ಇವುಗಳನ್ನು ಕಾಲಮಾನದ ಚೌಕಟ್ಟಿನಲ್ಲಿ ಸಾಂದರ್ಭಿಕವಾಗಿ ವಿಷಯಗಳಿಗನುಗುಣವಾಗಿ ಬಳಸಿಕೊಳ್ಳಲಾಗುವುದು. ಅಲ್ಲದೇ ಅವುಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಲಾಗುತ್ತದೆ. ಜೊತೆಗೆ ಇಲ್ಲಿ ಆಡಳಿತ ನಡೆಸಿದ ತಲಕಾಡಿನ ಗಂಗರು, ಕಲ್ಯಾಣ ಚಾಲುಕ್ಯರು, ಹೊಯ್ಸಳರಿಂದ ವಿಜಯನಗರ ಅರಸರವರೆಗಿನ ಆಡಳಿತ ಅವಧಿಯ ಕೊನೆಯ ಕಾಲಘಟ್ಟಕ್ಕೆ ಸೀಮಿತಗೊಳಿಸಲಾಗಿದೆ.

ಒಟ್ಟಾರೆಯಾಗಿ ಒಂದು ವಿಷಯದ ಬಗ್ಗೆ ಪರಿಪೂರ್ಣ ವಿಷಯ ನಿಷ್ಕರ್ಷೆಯಾಗಬೇಕಾದರೆ ಅದಕ್ಕೆ ಅದರದ್ದೇ ಆದ ಅಧ್ಯಯನದ ವ್ಯಾಪ್ತಿ ಹೊಂದುವುದು ಅತ್ಯಾವಶ್ಯಕವಾಗುತ್ತದೆ.

## ೧.೩. ಅಧ್ಯಯನದ ಸ್ವರೂಪ

ಪ್ರತಿಯೊಂದು ಪ್ರದೇಶವು ತನ್ನದೇ ಆದ ಮಹತ್ವನ್ನು ಹೊಂದಿರುತ್ತದೆ. ಅದರಂತೆ ಕಣಕಟ್ಟೆ ಹೋಬಳಿಯು ತನ್ನದೇ ಆದ ಮಹತ್ವವನ್ನು ಹೊಂದಿರುತ್ತದೆ. ಹಾಗೆಯೇ ಯಾವುದೇ ಒಂದು ವಿಷಯವನ್ನು ಕುರಿತು ಕೈಗೊಳ್ಳುವ ಅಧ್ಯಯನವು ಸೂಕ್ಷ್ಮವೂ, ಸಮಗ್ರವೂ, ಅಡಕವೂ ಜೊತೆಗೆ ವ್ಯವಸ್ಥಿತವಾದ ಕ್ರಮಬದ್ಧವಾದ ರೀತಿಯಲ್ಲಿ ಇರಬೇಕಾದರೆ ಅದಕ್ಕೆ ತನ್ನದೇ ಆದ ಅಧ್ಯಯನದ ಸ್ವರೂಪ ಅಗತ್ಯವಾಗಿರುತ್ತದೆ. ಆಗ ಅದರೊಳಗೆ ನಡೆಸಿದ ಅಧ್ಯಯನವು ವ್ಯವಸ್ಥಿತವಾದ ಅಧ್ಯಯನವಾಗಿ ಹೊರಹೊಮ್ಮಲು ಸಾಧ್ಯವಾಗುತ್ತದೆ.

"ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯ ಕುರಿತು ವಿಶ್ಲೇಷಿಸುವುದೇ ಅಧ್ಯಯನದ ಸ್ವರೂಪವಾಗಿದೆ. ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ

ಆರು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಈ ಅಧ್ಯಾಯಗಳಲ್ಲಿ ಉಪಶೀರ್ಷಿಕೆಗಳು ಇದೆ. ಪ್ರಸ್ತುತ ಅಧ್ಯಯನವು ಕಣಕಟ್ಟೆ ಹೋಬಳಿ ಸಂಸ್ಕೃತಿಯನ್ನು ಕುರಿತದ್ದಾಗಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತಾವನೆಯೊಂದಿಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಹಾಗೂ ಅಧ್ಯಯನಕ್ಕೆ ಬಳಸಿಕೊಂಡಿರುವ ವಿಧಿವಿಧಾನಗಳನ್ನು ಚರ್ಚಿಸಲಾಗುವುದು. ಪ್ರಾಸ್ತಾವಿಕ ವಿಚಾರಗಳೊಂದಿಗೆ ದೇವಾಲಯಗಳ ಮಹತ್ವ, ಶಾಸನಗಳು ಮತ್ತು ಸಾಂಸ್ಕೃತಿಕ ಆಯಾಮಗಳ ಬಗ್ಗೆ ಸ್ಪಷ್ಟಪಡಿಸಲಾಗಿದೆ.

ಎರಡನೇ ಅಧ್ಯಾಯವು ಭೌಗೋಳಿಕ ಪರಿಸರದ ವಿಶ್ಲೇಷಣೆ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ಒಳಗೊಂಡಿದೆ. ಕಣಕಟ್ಟೆಯು ಅರಸೀಕೆರೆ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿದ್ದು ಭೂ ಮೇಲ್ಮೈ ಸ್ವರೂಪ ಚದುರಿದಂತೆ ಬೆಟ್ಟಗುಡ್ಡಗಳನ್ನೊಳಗೊಂಡಿದೆ. ಹಾಗೆಯೇ ಕೆಲವು ಭಾಗಗಳು ಏರುತಗ್ಗಿನಿಂದ ಮತ್ತು ಸಮತಟ್ಟಾದ ಭೂಮಿಯಿಂದ ಕೂಡಿವೆ. ಹತ್ತಿರದಲ್ಲಿ ಯಾವುದೇ ನದಿಯ ನೀರು ಹರಿಯದಿರುವುದರಿಂದ ಕೆರೆಗಳು ಮತ್ತು ಕೊಳವೆ ಬಾವಿಗಳ ನೀರನ್ನು ಹೆಚ್ಚು ಜನತೆ ಆಶ್ರಯಿಸಿದ್ದು ಇವುಗಳಿಗೆ ಸಂಬಂಧಿಸಿದ ವಿವರಗಳನ್ನು ಹಾಗೂ ಇಲ್ಲಿನ ವಾಯುಗುಣ, ಅರಣ್ಯ ಸಂಪತ್ತು, ಭೌಗೋಳಿಕತೆಯನ್ನು ಕುರಿತಂತೆ ವಿವರಗಳನ್ನು ಚರ್ಚಿಸಲಾಗಿದೆ.

ಈ ಪ್ರದೇಶವು ಚಾರಿತ್ರಿಕ ಕಾಲಘಟ್ಟದಲ್ಲಿ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದು. ಅದರಲ್ಲಿ ಪ್ರಮುಖವಾಗಿ ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದು ಮೈಸೂರಿನ ಒಡೆಯರ ಕಾಲದವರೆಗೆ ಅವರುಗಳ ರಾಜಕೀಯ ಚರಿತ್ರೆಯನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳನ್ನು ಕುರಿತು ವಿವರಣೆಯನ್ನು ನೀಡಲಾಗುತ್ತಿದ್ದು ದೇವಾಲಯಗಳ ಹುಟ್ಟು ಮತ್ತು ನಿರ್ಮಾಣ, ಅವುಗಳ ಬೆಳವಣಿಗೆ ಮತ್ತು ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಕಂಡುಬರುವ ಶೈವ, ವೈಷ್ಣವ ಮತ್ತು ಶಾಕ್ತ ದೇವಾಲಯಗಳ ನಿರ್ಮಾಣ ಮತ್ತು ಪ್ರಾಚೀನತೆಯನ್ನು ಕುರಿತಾದ ಸಾಂಸ್ಕೃತಿಕ ವಿಶ್ಲೇಷಣೆಯನ್ನು ಮಾಡಲಾಗುವುದು. ಜೊತೆಗೆ ಶಾಸನಗಳು, ಅವುಗಳ ಕಾಲ, ಮಹತ್ವ, ಅವುಗಳು ಒಳಗೊಂಡಿರುವ ವಿವರಗಳು, ಶಾಸನಗಳ ವಿಧಗಳಾದ ಶಿಲಾಶಾಸನಗಳು, ವೀರಗಲ್ಲುಗಳು, ಮಹಾಸತಿಗಲ್ಲುಗಳು ಮುಂತಾದವುಗಳ ಸಮಗ್ರ ಚಿತ್ರಣವನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಅಂದಿನ ಕಾಲದ ಸಮಾಜ ಮತ್ತು ವ್ಯವಸ್ಥೆಯನ್ನು ಕುರಿತು ಚರ್ಚಿಸಲಾಗುವುದು. ಅಂದಿನ ಸಮಾಜದ ವರ್ಣವ್ಯವಸ್ಥೆ, ಧಾರ್ಮಿಕ ವ್ಯವಸ್ಥೆ ಹಾಗೂ ಜನಸಾಮಾನ್ಯರ ಆರ್ಥಿಕ ಸ್ಥಿತಿಗತಿಗಳನ್ನು ಕುರಿತು ವಿವೇಚಿಸಲಾಗುವುದು.

ಐದನೇ ಅಧ್ಯಾಯದಲ್ಲಿ ನಂಬಿಕೆಗಳು ಮತ್ತು ಆಚರಣೆಗಳನ್ನು ಕುರಿತು ಚರ್ಚಿಸಲಾಗುವುದು. ಇದರಲ್ಲಿ ಕಂಡುಬರುವ ಐತಿಹ್ಯಗಳು, ಸಮಾಜದಲ್ಲಿ ಕಂಡುಬರುವ ಹಬ್ಬಗಳು, ಕಲೆ, ಜಾತ್ರೆಗಳು, ಉತ್ಸವಗಳು ಮುಂತಾದವುಗಳನ್ನು ಜಾನಪದ ವೈಶಿಷ್ಟ್ಯದ ಮೂಲಕ ಜೀವನ ಶೈಲಿಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಕೊನೆಯ ಅಥವಾ ಆರನೇ ಅಧ್ಯಾಯವು ಸಮಾರೋಪವಾಗಿದ್ದು ಅಧ್ಯಯನದ ಫಲಿತಗಳು, ಕಂಡುಕೊಳ್ಳಲಾದ ಹೊಸ ಸಂಗತಿಗಳು ಹಾಗೂ ಇಡೀ ಅಧ್ಯಯನದ ಸಂಕ್ಷಿಪ್ತ ರೂಪವಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಪರಾಮರ್ಶನ ಗ್ರಂಥಗಳು, ನಕ್ಷೆಗಳು, ಛಾಯಾಚಿತ್ರಗಳನ್ನು ಅನುಬಂಧದಲ್ಲಿ ಕೊಡಲಾಗುತ್ತಿದೆ. ಹೀಗೆ ಕಣಕಟ್ಟೆ ಹೋಬಳಿ ಪರಿಸರದ ಸಮಗ್ರ ಚಿತ್ರಣವನ್ನು ಮೇಲಿನ ಅಧ್ಯಾಯಗಳಲ್ಲಿ ಸಂಯೋಜಿಸಲಾಗಿದೆ.

### ೧.೩. ಈವರೆಗಿನ ಅಧ್ಯಯನದ ಸಮೀಕ್ಷೆ

ಈ ಹಿಂದೆ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಅಂತರ್‌ಶಿಸ್ತೀಯ ಅಧ್ಯಯನದ ಮೂಲಕ ಕಣಕಟ್ಟೆ ಹೋಬಳಿ ವ್ಯಾಪ್ತಿಯ ಸಾಂಸ್ಕೃತಿಕ ಅಂಶಗಳ ಪುನರ್‌ರಚನೆಯನ್ನು ಮಾಡುವುದಾಗಿದೆ. ಇಲ್ಲಿಯವರೆಗೆ ಹಲವು ವಿದ್ವಾಂಸರು ಮತ್ತು ಸಂಶೋಧಕರು ಕಣಕಟ್ಟೆ ಪರಿಸರಕ್ಕೆ ಸಂಬಂಧಿಸಿದಂತೆ ಸಂಶೋಧನಾ ಪ್ರಬಂಧಗಳಲ್ಲಿ, ಗ್ರಂಥಗಳಲ್ಲಿ ಬಿಡಿ ಬಿಡಿ ಲೇಖನಗಳಲ್ಲಿ ವಿವರಗಳನ್ನು ನೀಡಿದ್ದಾರೆ. ಅವುಗಳು ಈ ಕೆಳಗಿನಂತಿವೆ.

ಅರಸೀಕೆರೆ ತಾಲ್ಲೂಕಿಗೆ ಸಂಬಂಧಿಸಿದಂತೆ ಎಪಿಗ್ರಾಫಿಯಾ ಕರ್ನಾಟಕ ಪರಿಷ್ಕೃತ ಹತ್ತನೇ ಸಂಪುಟದಲ್ಲಿ ಪ್ರಕಟಗೊಂಡಿರುವ ೩೭೮ ಶಾಸನಗಳಲ್ಲಿ ಕಣಕಟ್ಟೆ ಹೋಬಳಿಗೆ ಸೇರಿದಂತೆ ಸುಮಾರು ೬೯ ಶಾಸನಗಳು[೫] ಲಭ್ಯವಿದೆ. ಈ ಶಾಸನಗಳು ಅಧ್ಯಯನ ದೃಷ್ಟಿಯಿಂದ ಅವಶ್ಯಕವಾಗಿದ್ದು ಕೆಲವು ಶಾಸನಗಳನ್ನು ಬಳಸಿಕೊಳ್ಳಲಾಗಿದೆ.

ಅರಸೀಕೆರೆ ತಾಲ್ಲೂಕಿನ ಪ್ರಾಕ್‌ಚರಿತ್ರೆಯನ್ನು ಅರಿಯಲು ಈ ಪರಿಸರದ ಪ್ರಾಚೀನ ಮಾನವನ ನೆಲೆಗಳನ್ನು ಕುರಿತು ಹನುಮನಾಯಕರು "ಚಲುವನಹಳ್ಳಿ ಗವಿಮಠ ಒಂದು ಪ್ರಾಗೈತಿಹಾಸಿಕ ನೆಲೆ"[೬] ಮತ್ತು "ಅಪ್ರಕಟಿತ ಶಾಸನವುಳ್ಳ ವೀರಗಲ್ಲುಗಳು"[೭] ಎಂಬ ಬಿಡಿ ಲೇಖನದಲ್ಲಿ ಕಣಕಟ್ಟೆಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ಹಾಗೆ ಆರ್. ವೆಂಕಟೇಶ್‌ಮೂರ್ತಿಯವರು "ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು ಒಂದು ಶೋಧ"[೮] ಲೇಖನವನ್ನು ಇತಿಹಾಸದರ್ಶನದಲ್ಲಿ ಸಂಪುಟ ೧೧ರಲ್ಲಿ ಪ್ರಕಟಿಸಿದ್ದಾರೆ.

ಹನುಮನಾಯಕ “ಹೊಯ್ಸಳರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ ಕಳಿಕಟ್ಟೆ ಒಂದು ವಿಶ್ಲೇಷಣೆ”[೯] ಎಂಬ ಲೇಖನವು ಕಳಿಕಟ್ಟೆ ಗ್ರಾಮವು ನಗರೀಕರಣಕ್ಕೆ ತೆರೆದುಕೊಂಡ ಬಗೆಯನ್ನು ವಿಶ್ಲೇಷಿಸುತ್ತದೆ.

ಗೊರೂರು ಅನಂತರಾಜುರವರ “ಹಾಸನ ಜಿಲ್ಲೆಯ ದೇವಾಲಯ ದರ್ಶನ” ಎಂಬ ಕೃತಿಯಲ್ಲಿ ಇಡೀ ಜಿಲ್ಲೆಯ ಪ್ರಮುಖ ದೇವಾಲಯಗಳನ್ನು ಕುರಿತಂತೆ ಬರೆಯಲಾಗಿದ್ದು ಇದರಲ್ಲಿ ಕಣಕಟ್ಟೆ ಪ್ರದೇಶದ ದೇವಾಲಯಗಳನ್ನು ವಿವರಿಸಲಾಗಿದೆ.

ಆರ್. ಗೋಪಾಲ್‌ರವರು ಸಂಪಾದಿಸಿರುವ “ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ” ಎಂಬ ಪುಸ್ತಕದಲ್ಲಿ ಶ್ರೀವತ್ಸ. ಎಸ್. ವಟಿಯವರ “ನಾಗಪುರಿ ವನಗರ್ಭದಲ್ಲಿ ಐತಿಹಾಸಿಕ ಮತ್ತು ಪುರಾತತ್ವ ವೈಶಿಷ್ಟ್ಯಗಳು” ಎನ್ನುವ ಲೇಖನ ಹಾಗೇ ಕೆ.ಎನ್. ಮೋಹನ್‌ರವರ “ಅರಸೀಕೆರೆಯ ಈಶ್ವರ ದೇವಾಲಯ”, ಪ್ರವೀಣ ಬಿ. ಅವರ “ತಾಲ್ಲೂಕು ಶಾಸನಗಳಲ್ಲಿ ಕಂದಾಯದ ಉಗಮ ಮತ್ತು ಬೆಳವಣಿಗೆ”, ಆರ್.ಎಂ. ಷಡಕ್ಷರಯ್ಯರವರ “ಹಾಸನ ಜಿಲ್ಲೆಯ ಸ್ಮಾರಕ ಶಿಲ್ಪಗಳು” ಮತ್ತು ಶ್ರೀನಿವಾಸ ವಿ. ಪಾಡಿಗಾರ ಅವರ “ಅರಸೀಕೆರೆಯ ಈಶ್ವರ ದೇವಾಲಯ ಮೂಲ ಪ್ರಸಾದದ ಪ್ರಭೇದ ಪರಿಶೀಲನೆ”[೧೦] ಮುಂತಾದ ಬಿಡಿಲೇಖನಗಳು ಅರಸೀಕೆರೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳ ಬಗ್ಗೆ ವಿವರಣೆಯನ್ನು ದೇವಾಲಯಗಳ ರಚನೆ, ಶಿಲ್ಪಗಳು, ಶಾಸನಗಳ ವಿವರಗಳು ಮುಂತಾದವುಗಳನ್ನು ತಿಳಿಸುತ್ತದೆ.

ಎನ್.ಆರ್. ಲಲಿತಾಂಬ “ಅರಸೀಕೆರೆ ತಾಲ್ಲೂಕಿನ ಶಾಸನಗಳ ಅಧ್ಯಯನ” ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಕಣಕಟ್ಟೆಯನ್ನು ಒಳಗೊಂಡಂತೆ ಹಲವು ಶಾಸನಗಳ ವಿವರಗಳು, ಅವುಗಳು ಒಳಗೊಂಡಿರುವ ವಿಷಯಗಳು ಹಾಗೂ ಅಲ್ಲಿನ ಪರಿಸರದ ವಿವರಣೆಯನ್ನು ನೀಡಿದ್ದಾರೆ.[೧೧]

## ೧.೪. ಅಧ್ಯಯನದ ವಿಧಾನ

ಸಾಂಸ್ಕೃತಿಕ ಅಧ್ಯಯನದ ಹಿನ್ನಲೆಯನ್ನು ಇಟ್ಟುಕೊಂಡು ಕೈಗೊಂಡಿರುವ ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತವಾಗಿದ್ದು, ಅಧ್ಯಯನದ ವ್ಯಾಪ್ತಿಗೆ ಒಳಪಡುವ ಪ್ರತಿಯೊಂದು ಗ್ರಾಮ ಅಥವಾ ಪ್ರದೇಶಗಳಿಗೆ ನೇರವಾಗಿ ಭೇಟಿ ನೀಡಿ ದೊರೆಯುವ ಸಂಪನ್ಮೂಲ ಅವಶೇಷಗಳನ್ನು ಪರಿಶೀಲಿಸಿ ದಾಖಲಿಸಿಕೊಳ್ಳಲಾಗಿದೆ. ಹಾಗೆಯೇ ಪ್ರಾಥಮಿಕ ಹಾಗೂ ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಈ ಪರಿಸರದ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಲ್ಲಿನ ಮೌಖಿಕ ಕಥನಗಳನ್ನು ಐತಿಹ್ಯಗಳನ್ನು ಹೊಂದಿರುವಂತಹ ಅಥವಾ ತಿಳಿದಿರುವಂತಹ ಸಂಪನ್ಮೂಲ ವ್ಯಕ್ತಿಗಳನ್ನು ಭೇಟಿ ಮಾಡಿ, ಚರ್ಚಿಸಿ, ವಿಷಯಗಳನ್ನು ಸಂಗ್ರಹಿಸಲಾಗಿದೆ.

ಮುಖ್ಯವಾಗಿ ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು ಮುಂತಾದ ಆಕರಗಳ ದಾಖಲೀಕರಣ ಮತ್ತು ಛಾಯಾಚಿತ್ರಗಳನ್ನು ತೆಗೆದುಕೊಂಡು ತಲನಕ್ಷೆ ಹಾಕಿಕೊಳ್ಳಲಾಗುವುದು. ಎಲ್ಲಾ ಬಗೆಯ ಸರ್ಕಾರಿ ಕಾಗದ ಪತ್ರಗಳು, ಲೇಖನಗಳು, ನಿಯತಕಾಲಿಕೆಯಲ್ಲಿ ದೊರೆಯುವ ಆಧಾರಗಳನ್ನು ಮತ್ತು ಸಂಶೋಧನಾ ಲೇಖನಗಳನ್ನು ಹಾಗೂ ಪಿಎಚ್.ಡಿ. ಮಹಾಪ್ರಬಂಧಗಳನ್ನು ಆಧರಿಸಿ ಅವಶ್ಯಕ ವಿಷಯಗಳನ್ನು ಪರಿಶೀಲಿಸಿ ವಿಷಯಾನುಸಾರ ವಿಮರ್ಶಿಸಿ, ವಿಶ್ಲೇಷಿಸಿ, ಸಂಯೋಜಿಸಿ, ಅಂತರ್‌ಶಿಸ್ತೀಯ ಅಧ್ಯಯನದ ಮೂಲಕ ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಚರಿತ್ರೆಯನ್ನು ನಿರೂಪಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಲಕ್ಷ್ಮಣ್ ತೆಲಗಾವಿ(ಸಂ), **ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ,** ಪ್ರಸ್ತಾವನೆ, ಪು.೫–೬

೨. ಗೊರೂರು ಅನಂತರಾಜು, **ಹಾಸನ ಜಿಲ್ಲೆಯ ದೇವಾಲಯ ದರ್ಶನ,** ಪು.೧೬೧.

೩. ಅರಸೀಕೆರೆ ತಾಲ್ಲೂಕು ತಹಶೀಲ್ದಾರ್ ಕಛೇರಿಯಿಂದ ಪಡೆದ ಮಾಹಿತಿ.

೪. ಅದೇ

೫. ಎಪಿಗ್ರಾಫಿಯಾ ಕರ್ನಾಟಿಕಾ(ಪರಿಷ್ಕೃತ) ಸಂ.೧೦, ಪು.೯೧–೧೭೧

೬. ಇತಿಹಾಸ ದರ್ಶನ, ಸಂ. ೯, ಪು.೬-೮.

೭. ಇತಿಹಾಸ ದರ್ಶನ, ಸಂ. ೧೦, ಪು.೯೩-೯೬.

೮. ಇತಿಹಾಸ ದರ್ಶನ, ಸಂ. ೧೧, ಪು.೩೭-೩೮.

೯. ಇತಿಹಾಸ ದರ್ಶನ, ಸಂ. ೧೩, ಪು.೫೭-೫೯.

೧೦. ಗೋಪಾಲ್ ಆರ್.(ಸಂ), **ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪು.೩೯೭

೧೧. ಲಲಿತಾಂಬ ಎನ್.ಆರ್., **ಅರಸೀಕರೆ ತಾಲ್ಲೂಕಿನ ಶಾಸನಗಳ ಅಧ್ಯಯನ,** ಪಿಎಚ್.ಡಿ. ಮಹಾಪ್ರಬಂಧ(ಅಪ್ರಕಟಿತ)

ಅಧ್ಯಾಯ ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

೨.೧. ಭೌಗೋಳಿಕ ಹಿನ್ನೆಲೆ

೨.೨. ಚರಿತ್ರೆ

## ಅಧ್ಯಾಯ ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

### ೨.೧. ಭೌಗೋಳಿಕ ಹಿನ್ನೆಲೆ

ಒಂದು ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಯ ಬೆಳವಣಿಗೆಯಲ್ಲಿ ಅಲ್ಲಿಯ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತು ಬಹಳ ಮುಖ್ಯವಾಗಿರುತ್ತದೆ. ಹಾಗೆಯೇ ಇತಿಹಾಸವು ಎಲ್ಲಾ ಶಾಸ್ತ್ರಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದೆ. ಅದರಲ್ಲೂ ಮುಖ್ಯವಾಗಿ ಭೂಗೋಳಶಾಸ್ತ್ರದೊಂದಿಗೆ ಅತ್ಯಂತ ನಿಕಟ ಸಂಬಂಧವನ್ನು ಹೊಂದಿದೆ. ಭೌಗೋಳಿಕ ಅಂಶಗಳು ಇತಿಹಾಸ ರಚನೆಗೆ ಬಹುಮುಖ್ಯ ಸಾಮಗ್ರಿಗಳಾಗಿವೆ. ಯಾವುದೇ ಒಂದು ನಿರ್ದಿಷ್ಟ ಪ್ರದೇಶವನ್ನು ಅಧ್ಯಯನ ಕೈಗೊಳ್ಳುವುದಕ್ಕಿಂತ ಮುಂಚಿತವಾಗಿ ಆ ಪ್ರದೇಶದ ಭೌಗೋಳಿಕ ಅಂಶಗಳನ್ನು ತಿಳಿದುಕೊಳ್ಳುವುದು ಅತ್ಯವಶ್ಯಕವಾಗಿದೆ. ಭೌಗೋಳಿಕ ಪರಿಸರದಲ್ಲಿ ಸಂಸ್ಕೃತಿಯು ಕೂಡ ತನ್ನ ಹುಟ್ಟು ಮತ್ತು ಅಂತ್ಯವನ್ನು ಕಂಡುಕೊಳ್ಳುತ್ತದೆ. ಆಯಾ ಪ್ರದೇಶದ ಜನರ ಜೀವನ ಅಲ್ಲಿನ ಪರಿಸರದ ಸ್ವರೂಪ ಹಾಗೂ ಭೌಗೋಳಿಕ ವೈಶಿಷ್ಟ್ಯತೆಗಳನ್ನು ಅರಿಯದೇ ಯಾವುದೇ ಒಂದು ಅಧ್ಯಯನ ಅಪೂರ್ಣವಾಗುತ್ತದೆ. ಈ ಹಿನ್ನೆಲೆಯಲ್ಲಿ ಆಯಾ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಗಳ ವಿಕಸನದಲ್ಲಿ ಅಲ್ಲಿನ ಭೌಗೋಳಿಕ ಪರಿಸರ ಮತ್ತು ವೈಶಿಷ್ಟ್ಯತೆಗಳು ಬಹಳ ಮುಖ್ಯ ಪಾತ್ರವನ್ನು ವಹಿಸುತ್ತವೆ.

ಯಾವುದೇ ಒಂದು ಪ್ರದೇಶದಲ್ಲಿ ಮನುಷ್ಯನ ಸ್ಥಿತಿ ಉತ್ತಮವಾಗಿರಲು ಆ ಪ್ರದೇಶದಲ್ಲಿರುವ ಪರ್ವತಶ್ರೇಣಿ, ಜಲಸಂಪತ್ತು, ಬೆಟ್ಟಗುಡ್ಡಗಳು, ತೀರ ಪ್ರದೇಶ, ವಾಯುಗುಣ, ಮಣ್ಣಿನ ರಚನೆ ಮುಂತಾದ ಭೌಗೋಳಿಕ ಅಂಶಗಳು ಪ್ರಮುಖ ಕಾರಣವಾಗಿರುತ್ತದೆ. ಹಾಗೆಯೇ ಆ ಪರಿಸರವು ಅಲ್ಲಿನ ಜನರ ಜೀವನ ಹಾಗೂ ಸಾಂಸ್ಕೃತಿಕ ವಿಚಾರಗಳನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ಅಭಿವೃದ್ಧಿಗೊಳಿಸಲು ಸಹಕಾರಿಯಾಗಿ ನಿಲ್ಲುತ್ತದೆ.

ಈ ಅಂಶಗಳನ್ನು ಪರಿಗಣಿಸಿ ಪ್ರಸ್ತುತ ಅಧ್ಯಯನ ಕಣಕಟ್ಟೆ ಹೋಬಳಿ ಪರಿಸರದ ಭೌಗೋಳಿಕ ಲಕ್ಷಣಗಳು ಮಾನವ ಜೀವನದ ಮೇಲೆ ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳುವುದು ಅಗತ್ಯವಾಗಿದೆ.

**೨.೧.೧. ಪದ ನಿಷ್ಪತ್ತಿ**

ಕಣಕಟ್ಟೆಯು ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನಲ್ಲಿ ಬರುವ ಒಂದು ಹೋಬಳಿಯಾಗಿದೆ. ಈ ಕಣಕಟ್ಟೆ ಎಂಬ ಪದದ ನಿಷ್ಪತ್ತಿಯನ್ನು ತಿಳಿಯುವಾಗ ಅದನ್ನು ಬಿಡಿಸಿ ಬರೆದಾಗ ಕಣ+ಕಟ್ಟೆ ಎಂದಾಗುತ್ತದೆ. ಕಣ ಎಂದರೆ ಕನ್ನಡ ರತ್ನಕೋಶದ ಪ್ರಕಾರ ಧಾನ್ಯಗಳನ್ನು ಒಕ್ಕುವ ಸ್ಥಳ, ರಣರಂಗ, ರವಕೆಬಟ್ಟೆ, ಸೂಕ್ಷ್ಮವಾದ ಅಂಶ.[೧] ಹೀಗೆ ಅರ್ಥಗಳು ಕಂಡುಬರುತ್ತವೆ. ಕಟ್ಟೆ ಎಂದರೆ ಕೆಲವು ಎಕರೆ ಪ್ರದೇಶದಲ್ಲಿ ನೀರು ಶೇಖರಣೆಯಾಗಿರುವ ಸ್ಥಳ. ಇಲ್ಲಿ ಕಣ ಪದವನ್ನು ಗಮನಿಸಿದಾಗ ಈ ಪ್ರದೇಶದಲ್ಲಿ ಹೆಚ್ಚು ಧಾನ್ಯಗಳನ್ನು ಬೆಳೆಯುತ್ತಿದ್ದುದರಿಂದ ಅವುಗಳನ್ನು ಶುದ್ಧ ಮಾಡುವ ಸ್ಥಳ ಕಣವಾಗಿರುವುದರಿಂದ ಈ ಪ್ರದೇಶಕ್ಕೆ ಈ ಹೆಸರು ಬಂದಿರಬಹುದು ಎಂದು ಊಹಿಸಬಹುದು. ಹಾಗೆಯೇ ರಾಜರುಗಳ ಆಳ್ವಿಕೆಯ ಕಾಲದಲ್ಲಿ ಈ ಪ್ರದೇಶದಲ್ಲಿ ಹೆಚ್ಚು ಯುದ್ಧಗಳು ಘಟಿಸಿವೆ ಎನ್ನುವುದನ್ನು ಶಾಸನಾಧಾರಗಳಿಂದ ತಿಳಿಯುವುದರಿಂದ ರಣರಂಗ ಎನ್ನುವ ಅರ್ಥದಲ್ಲಿಯೂ ಈ ಪ್ರದೇಶಕ್ಕೆ ಕಣ ಎನ್ನುವ ಹೆಸರು ಬಂದಿರಬಹುದು. ಮುಂದೆ ಅಲ್ಲಿ ದೊಡ್ಡ ಕೆರೆಯು ನಿರ್ಮಾಣವಾಗಿದ್ದರಿಮದ ಕಟ್ಟೆ ಎನ್ನುವ ಪದವು ಜೋಡಣೆಯಾಗಿ ಕಣಕಟ್ಟೆ ಎಂದಾಗಿರಬಹುದೆಂದು ಊಹಿಸಬಹುದಾಗಿದೆ.

ಕಣಕಟ್ಟೆ ಎಂಬ ಪದದ ನಿಷ್ಪತ್ತಿಯನ್ನು ತಿಳಿಸುವಾಗ ಪುರಾಣದ ಪ್ರಕಾರ ಕಣಕಟ್ಟೆ ಪ್ರದೇಶದಲ್ಲಿ ದೊಡ್ಡದಾದ ಕೆರೆಯು ಇದ್ದುದರಿಂದ ಈ ಪ್ರದೇಶಕ್ಕೆ ಕಣಕಟ್ಟೆ ಎಂದು ಕರೆಯುತ್ತಾರೆ. ಅಂದರೆ ಕೆರೆಯನ್ನೇ ಇಲ್ಲಿನ ಜನರು ಕಟ್ಟೆ ಎಂದು ಹೇಳಿ ಕಣಕಟ್ಟೆ[೨] ಎಂದು ಹೇಳುತ್ತಾರೆ.

ಐತಿಹ್ಯದ ಪ್ರಕಾರ ಈ ಪ್ರದೇಶದಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣ ಕುಲದವರು ತಮ್ಮ ಹೆಣ್ಣು ಮಕ್ಕಳಿಗೆ ಋತುಮತಿಯರಾಗುವ ಮೊದಲೇ ವಿವಾಹ ಮಾಡುತ್ತಿದ್ದರು. ಆದರೆ ದುರದೃಷ್ಟವಷಾತ್ ಒಬ್ಬಳು ಹುಡುಗಿಯು ವಿವಾಹ ಪೂರ್ವದಲ್ಲಿ ಋತುಮತಿಯಾಗುತ್ತಾಳೆ. ಆಗ ಊರಿನ ಜನರೆಲ್ಲ ಸೇರಿ ಅವಳಿಗೆ ಕಣ್ಣುಕಟ್ಟಿ ಕಾಡಿಗೆ ಕರೆದುಕೊಂಡು ಹೋಗಿ ಒಬ್ಬಳನ್ನೇ ಬಿಟ್ಟು ಬರುತ್ತಾರೆ. ಇದರಿಂದಾಗಿ ಈ ಊರಿಗೆ ಕಣಕಟ್ಟೆ ಎಂಬ ಹೆಸರು ಬಂದಿತು ಎಂದು ಹೇಳಲಾಗುತ್ತದೆ. ಅಲ್ಲದೆ ಆ ಹುಡುಗಿಯು ಕಾಡಿನಲ್ಲಿ ಮರಣ ಹೊಂದದೆ ಊರಿನ ಕೆರೆಯ ಏರಿಯ ಮೇಲೆ ಬಂದು ನೆಲೆಸಿದಳು. ಕಾಲಾನಂತರದಲ್ಲಿ ಅವಳು ಊರ ಜನರ ಕಷ್ಟಗಳಿಗೆ ಆಸರೆಯಾದಳು.

ಹಾಗಾಗಿ ಮುಂದೆ ಅವಳನ್ನು ದೇವತೆ ಎಂದು ಸ್ವೀಕರಿಸಿ ಕೆರೆಯ ಏರಿಯ ಮೇಲೆ ದುರ್ಗಮ್ಮ ಎಂದು ದೇವತೆಯ ಗುಡಿಯನ್ನು ಕಟ್ಟಿ ಜನತೆ ಇಂದಿಗೂ ಪೂಜಿಸುವುದನ್ನು[೩] ಕಾಣುತ್ತೇವೆ.

ಇತಿಹಾಸದ ಪ್ರಕಾರ ಕರ್ನಾಟಕವು ಪ್ರಾಚೀನ ಕಾಲದಿಂದಲೂ ಸುದೀರ್ಘ ಇತಿಹಾಸವನ್ನು ಹೊಂದಿದ್ದು ಇದಕ್ಕೆ ಪ್ರತಿ ಹಳ್ಳಿಗಳಲ್ಲಿಯೂ ದೊರೆತ ಶಾಸನಗಳೇ ಸಾಕ್ಷಿಯಾಗಿವೆ. ಅದೇ ರೀತಿ ಅರಸೀಕೆರೆ ತಾಲ್ಲೂಕಿನ ಅರಕೆರೆ ಗ್ರಾಮದಲ್ಲಿ ದೊರೆತ ಪ್ರಾಚೀನ ಶಿಲಾಶಾಸನದಲ್ಲಿ ಕಣಕಟ್ಟೆಯನ್ನು ಕಳಿಕಟ್ಟೆ ಎಂದು ಉಲ್ಲೇಖಿಸಲಾಗಿದೆ.[೪]

ಹಾಗೆಯೇ ಬಾಣಾವರ ಹೋಬಳಿಯ ಗ್ರಾಮವಾದ ಬೇಡರ ಹಳ್ಳಿಯಲ್ಲಿ ದೊರೆತಿರುವ ವೀರಗಲ್ಲಿನಲ್ಲಿ ಕಣಕಟ್ಟೆ ಪದದ ಪ್ರಯೋಗವಾಗಿದೆ. 'ಕಾನಕಟ್ಟೆ', 'ಕನಕನಕಟ್ಟೆ' ಮುಂತಾದ ಹೆಸರುಗಳ ಉಲ್ಲೇಖವು ಕೂಡ ಶಾಸನಗಳಲ್ಲಿ ಕಂಡುಬಂದಿದೆ. ಹೊಯ್ಸಳ ಕಾಲದ ಅನೇಕ ಶಾಸನಗಳಲ್ಲಿ ಕಣಕಟ್ಟೆಯನ್ನು 'ವಿಜಯನರಸಿಂಹ ಪುರ'ವೆಂದು ಕರೆಯಲಾಗಿದ್ದು, ನಂತರ ೧೩ನೇ ಶತಮಾನದ ಹೊತ್ತಿಗೆ ಇದೊಂದು ಅಗ್ರಹಾರವಾಗಿ ರೂಪುಗೊಂಡಿತ್ತು. ಹೊಯ್ಸಳ ಕಾಲದ ಅನೇಕ ಶಾಸನಗಳಲ್ಲಿ ಕಳಕಟ್ಟಿ ಗ್ರಾಮ ಇದೇ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದಿತ್ತು. ಇದು ದಕ್ಷಿಣ ಭಾರತದಲ್ಲಿ ಪ್ರಮುಖ ಧಾರ್ಮಿಕ ಮತ್ತು ವ್ಯಾಪಾರಿ ಕೇಂದ್ರವಾಗಿತ್ತು.[೫] ಕ್ರಿ.ಶ.೧೧, ರಿಂದ ೧೪ನೇ ಶತಮಾನದ ಶಾಸನಗಳ ಪ್ರಕಾರ ಕಣಕಟ್ಟೆಯು ಮಗರೆ ಮುನ್ನೂರರ ಮೊದಲ ಬಾಡವಾಗಿತ್ತು.[೬] ಒಟ್ಟಾರೆಯಾಗಿ ಕಣಕಟ್ಟೆ ಎಂಬ ಪದವು ಮೊದಲು ಕಳಿಕಟ್ಟೆ ಕನಕನಕಟ್ಟೆ ಕಾನಕಟ್ಟೆಗಳಿಂದ ಮುಂದುವರೆದು ಕಣಕಟ್ಟೆ ಎಂದು ಬಂದಿದೆ.

## ೨.೧.೨. ಭೌಗೋಳಿಕ ಪ್ರದೇಶ

ಕಣಕಟ್ಟೆ ಹೋಬಳಿಯು ಜಿಲ್ಲಾ ಕೇಂದ್ರವಾದ ಹಾಸನದಿಂದ ಸುಮಾರು ೬೩ ಕಿ.ಮೀ. ದೂರದಲ್ಲಿದ್ದು, ಅರಸೀಕೆರೆ ತಾಲ್ಲೂಕು ಕೇಂದ್ರಕ್ಕೆ ೨೩ ಕಿ.ಮೀ. ಅಂತರದಲ್ಲಿದೆ. ಪ್ರಸ್ತುತ ಅಧ್ಯಯನ ಪ್ರದೇಶವಾದ ಕಣಕಟ್ಟೆ ಹೋಬಳಿಯು ೬೧.೦೪೪ರಷ್ಟು ಭೂವಿಸ್ತೀರ್ಣವನ್ನು[೭] ಹೊಂದಿದೆ. ಇದು ೧೩° ೩೦' ೫೪° ಉತ್ತರ ಅಕ್ಷಾಂಶವನ್ನು ಮತ್ತು ೭೬° ೧೯' ೭° ಪೂರ್ವ ರೇಖಾಂಶಗಳ[೯] ನಡುವೆ ಕಂಡುಬರುತ್ತದೆ. ಒಟ್ಟು ೬೪ ಗ್ರಾಮಗಳನ್ನೊಳಗೊಂಡಿದ್ದು ಎಲ್ಲಾ ಗ್ರಾಮಗಳಲ್ಲಿಯೂ ಜನವಸತಿಯನ್ನು[೧೦] ಕಾಣುತ್ತೇವೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಒಟ್ಟು ೨೫ ಕೆರೆಗಳು ಕಂಡುಬರುತ್ತವೆ.

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಹೆಚ್ಚು ಬೆಟ್ಟಗುಡ್ಡಗಳು ಕಂಡುಬರುವುದು ವಿರಳವಾಗಿದೆ. ಮಿಶ್ರಿತ ಕಲ್ಲು ಬಂಡೆಗಳಿಂದ ಕೂಡಿದ ಚಿಕ್ಕ ಚಿಕ್ಕ ಬೆಟ್ಟ-ಗುಡ್ಡಗಳು ಕಂಡುಬಂದರೂ ಹೆಚ್ಚು ಭಾಗ ಬಯಲು ಪ್ರದೇಶದಿಂದ ಕೂಡಿದೆ.

### ೨.೧.೩. ಭೂ ಸ್ವರೂಪ

ಕಣಕಟ್ಟೆ ಹೋಬಳಿ ಪ್ರದೇಶವು ಕೆಲವು ಕಡೆ ಸಮತಟ್ಟಾಗಿದ್ದರೂ ಅನೇಕ ಕಡೆ ಉಬ್ಬು-ತಗ್ಗುಗಳಿಂದ ಕೂಡಿದೆ. ಈ ಪ್ರದೇಶದಲ್ಲಿ ಕಲ್ಲು ಮತ್ತು ಮರಳು ಮಿಶ್ರಿತವಾದಂತಹ ಕೆಂಪು ಭೂಮಿ ಹಾಗೂ ಕೆಲವು ಕಡೆ ಕರಲು ರೀತಿಯ ನೆಲವಿದೆ. ಕರಲು ನೆಲ ಎಂದರೆ ಉಪ್ಪು ನೆಲ. ಇದರ ಕೆಳಗೆ ಜೇಡಿಮಣ್ಣು ಇರುತ್ತದೆ. ಈ ನೆಲ ಹೆಚ್ಚು ನೀರನ್ನು ಶೇಖರಿಸುವುದಿಲ್ಲ. ವ್ಯವಸಾಯಕ್ಕೆ ಹೆಚ್ಚು ಯೋಗ್ಯ ಪ್ರಮಾಣದ ಕೆಂಪು ಮತ್ತು ಕಪ್ಪು ಮಣ್ಣನ್ನು ಹೊಂದಿರುವ ಭೂಮಿಯು ಹೆಚ್ಚಾಗಿ ಕಂಡುಬರುವುದರಿಂದ ವ್ಯವಸಾಯವು ಪ್ರಮುಖ ಉದ್ಯೋಗವಾಗಿದೆ. ಜೊತೆಗೆ ತೋಟಗಾರಿಕೆ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಕಪ್ಪು ಮತ್ತು ಬಿಳಿಯ ಕಲ್ಲು ಬಂಡೆಗಳು ಜೊತೆಗೆ ಬಳಪದ ಕಲ್ಲಿನ ರೂಪದ ಕಲ್ಲು ಬಂಡೆಗಳಿಂದ ಕೂಡಿದ ಸಣ್ಣ ಬೆಟ್ಟ ಗುಡ್ಡಗಳು ಕಂಡುಬಂದರೂ ಹೆಚ್ಚು ವಿಸ್ತಾರವಾಗಿ ಹರಡಿಕೊಂಡಿಲ್ಲ. ವಿರಳವಾದ ಅರಣ್ಯ ಸಂಪತ್ತು, ವನ್ಯಜೀವಿ ಹಾಗೂ ತನ್ನದೇ ಆದಂತಹ ಜಲಸಂಪತ್ತು ಹೊಂದಿರುವುದರೊಂದಿಗೆ ಬಯಲಿನಿಂದ ಕೂಡಿದ ಸಮತಟ್ಟಾದ ಭಾಗಗಳಿಂದ ಕೂಡಿದೆ.[೧೦]

ಉಷ್ಣ ಮತ್ತು ಶೀತ ಹವಾಗುಣವೆರಡನ್ನೂ ಹೊಂದಿದ್ದರೂ ಹೆಚ್ಚು ಉಷ್ಣ ಹವಾಗುಣ ಮತ್ತು ಸೀಮಿತವಾದ ಖನಿಜ ಸಂಪತ್ತು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣು ಕಂಡುಬರುವುದರಿಂದ ಕಡಿಮೆ ಮಳೆ ಬಿದ್ದರೂ ಸಹ ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲಕರವಾಗಿದೆ. ಈ ಪ್ರದೇಶದಲ್ಲಿ ಪ್ರಮುಖವಾಗಿ ಮತ್ತು ಸಾಮಾನ್ಯವಾಗಿ ರಾಗಿ, ಜೋಳ, ಶೇಂಗಾ, ಕಡಲೇ, ಎಳ್ಳು, ನವಣೆ, ಭತ್ತ, ಸಜ್ಜೆ, ಅಲಸಂದೆ, ತೊಗರಿ, ಹೆಸರು, ಉದ್ದು ಮುಂತಾದ ಆಹಾರ ಬೆಳೆಗಳನ್ನು ಮತ್ತು ತೆಂಗು ಮತ್ತು ಅಡಕೆಯಂತಹ ತೋಟಗಾರಿಕಾ ಬೆಳೆಗಳನ್ನು ಬೆಳೆಯುತ್ತಾರೆ. ಇತ್ತೀಚೆಗೆ ವಾಣಿಜ್ಯ ಬೆಳೆಗಳಾದ ಪಪ್ಪಾಯಿ, ದಾಳಿಂಬೆ, ಮೆಡಿಸಿನ್ ಸೌತೆ[೧೧] ಮುಂತಾದ ಬೆಳೆಗಳನ್ನು ನೀರಾವರಿ ವ್ಯವಸ್ಥೆ ಹೊಂದಿರುವ ರೈತರು ಬೆಳೆಯುತ್ತಾರೆ.

### ೨.೧.೪. ಜಲಸಂಪತ್ತು

ಭೂಮಿಯ ಮೇಲೆ ಕಂಡುಬರುವ ಜೀವಂತ ಪ್ರಾಣಿಗಳಿಗೆ ಗಾಳಿ ಉಸಿರಾಗಿರುವಂತೆ ನೀರು ಜಗತ್ತಿನ ಸಮಸ್ತಜೀವಿಗಳಿಗೂ, ಸಸ್ಯಗಳಿಗೂ ಅಷ್ಟೇ ಮುಖ್ಯವಾಗಿದೆ. ಪಂಚಭೂತಗಳಲ್ಲೂ ನೀರು ಸ್ಥಾನವನ್ನು ಪಡೆದುಕೊಂಡಿದೆ. ಮಾನವ ಆಹಾರವಿಲ್ಲದಿದ್ದರೆ ಕೆಲವು ದಿನಗಳ ಕಾಲ ಬದುಕಬಲ್ಲ. ಆದರೆ ನೀರಿಲ್ಲದೆ ಮಾನವ ಬದುಕಲಾರ. ಇದರಿಂದ ಪ್ರತಿಯೊಬ್ಬ ಮಾನವನು ನೀರನ್ನು ಎಷ್ಟು ಜೋಪಾನವಾಗಿ ಸಂರಕ್ಷಿಸಿಕೊಳ್ಳಬೇಕೆಂದು ತಿಳಿಯುವುದು ಪ್ರತಿಯೊಬ್ಬರ ಆದ್ಯ

ಕರ್ತವ್ಯವಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ದೊಡ್ಡ ಕೆರೆಗಳು, ಸಣ್ಣ ಕೆರೆಗಳು, ಹಳ್ಳಗಳು, ಕಟ್ಟೆಗಳು, ಬಾವಿಗಳು ನೀರಿನ ಸಂಪನ್ಮೂಲಗಳಾಗಿವೆ. ಇವುಗಳೆಲ್ಲವೂ ಮಳೆಗಾಲದಲ್ಲಿ ತುಂಬಿ ಹರಿಯುತ್ತವೆ. ಬೇಸಿಗೆ ಕಾಲದಲ್ಲಿ ಒಣಗಿ ಹೋಗುತ್ತವೆ. ಇಲ್ಲಿ ಯಾವುದೇ ನದಿಗಳು ಹರಿಯುವುದಿಲ್ಲ. ಜನತೆ ಮತ್ತು ಪ್ರಾಣಿ ಪಕ್ಷಿಗಳು ಕೆರೆ, ಬಾವಿ ಮತ್ತು ಕೊಳವೆ ಬಾವಿಗಳ ನೀರನ್ನೇ ಅವಲಂಬಿಸಿವೆ. ರೈತರು ಹೆಚ್ಚಾಗಿ ಮಳೆಯ ನೀರನ್ನೇ ಅವಲಂಬಿಸಿದ್ದಾರೆ. ಕಣಕಟ್ಟೆ ಹೋಬಳಿಯಲ್ಲಿ ಸುಮಾರು ೨೫ ದೊಡ್ಡ ಮತ್ತು ಸಣ್ಣ ಕೆರೆಗಳಿವೆ. ಕಣಕಟ್ಟೆಯ ಕೆರೆಯು ಈ ಹೋಬಳಿಯ ಅತ್ಯಂತ ದೊಡ್ಡ ಕೆರೆಯಾಗಿದ್ದು, ೧೦೦ ಎಕ್ಕರೆಗೂ ಹೆಚ್ಚು ಭೂ ಪ್ರದೇಶವನ್ನಾವರಿಸಿದೆ. ಇನ್ನು ದೊಡ್ಡಮೇಟಿಕುರ್ಕೆ, ರಾಂಪುರ, ಸಾತಂಗೆರೆ ಮುಂತಾದ ಪ್ರದೇಶಗಳು ಸಣ್ಣ ಸಣ್ಣ ಕೆರೆಗಳನ್ನು ಹೊಂದಿವೆ. ಕಣಕಟ್ಟೆ ಹೋಬಳಿಯು ೧೫೬.೭೫ ಹೆಕ್ಟೇರ್ ನೀರಾವರಿ ಪ್ರದೇಶವನ್ನು ಹೊಂದಿದೆ.[೧೨] ಕೆರೆಗಳು ಸಂಪೂರ್ಣವಾಗಿ ಮಳೆಯ ನೀರನ್ನೇ ಅವಲಂಬಿಸಿವೆ. ಮಳೆಯು ಹೆಚ್ಚು ಬರದಿದ್ದರೆ ಕೆರೆಗಳು ಒಣಗಿ ಹೋಗುತ್ತದೆ. ಕಣಕಟ್ಟೆಯಲ್ಲಿ ೯೮೨.೨೨ ಎಂ.ಎಂ.ರಷ್ಟು ವಾರ್ಷಿಕವಾಗಿ ಮಳೆಯಾಗುತ್ತದೆ.[೧೩] ಕೆರೆ ನೀರಾವರಿಯು ಹೆಚ್ಚಾಗಿ ಕಂಡುಬರುತ್ತದೆ. ಅದನ್ನು ಉಳಿದಂತೆ ಬಾವಿಗಳು ನೀರಾವರಿಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಇತ್ತೀಚಿನ ದಿನಗಳಲ್ಲಿ ಕೊಳವೆ ಬಾವಿಗಳ ಮೂಲಕ ನೀರನ್ನು ಹೊರತೆಗೆದು ಕೃಷಿಗೆ, ಕುಡಿಯುವ ನೀರಿಗಾಗಿ ಬಳಕೆ ಮಾಡಿಕೊಳ್ಳುತ್ತಿದ್ದಾರೆ. ಅಂತರ್ಜಲವನ್ನು ಬಳಸಿದಂತೆ ಅಂತರ್ಜಲದ ಕ್ರೂಢೀಕರಣ ಕಡಿಮೆಯಗುತ್ತಿದೆ. ದಿನದಿಂದ ದಿನಕ್ಕೆ ಅಂತರ್ಜಲ ಕುಸಿಯುತ್ತಿದ್ದು ೭೦೦ ಅಡಿಗಳಷ್ಟು ಕೊಳವೆ ಬಾವಿ ಕೆಳಗೆ ಇಳಿಸಿದರೂ ಸಾಕಷ್ಟು ಪ್ರಮಾಣದಲ್ಲಿ ನೀರು ಲಭ್ಯವಿಲ್ಲ. ಆದರೆ ಈ ಪರಿಸರದ ರೈತರು ಕೊಳವೆ ಬಾವಿಯನ್ನು ಪ್ರಧಾನವನ್ನಾಗಿಸಿ ಕೊಂಡಿದ್ದಾರೆ. ಇದರಲ್ಲಿ ಒಂದು ಆತಂಕಕಾರಿ ವಿಷಯವೆಂದರೆ ಕೊಳವೆ ಬಾವಿಯಿಂದ ಬರುತ್ತಿರುವ ನೀರಿನಲ್ಲಿ ಹೆಚ್ಚು ಹೆಚ್ಚು ಪ್ಲೋರೈಡ್ ಮತ್ತು ನೈಟ್ರೇಟ್‌ನಂತಹ ಲವಣಾಂಶಗಳು ಕಂಡುಬರುತ್ತಿದ್ದು, ಮಾನವ ಮತ್ತು ಪ್ರಾಣಿಗಳ ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮವನ್ನು ಬೀರುತ್ತಿದೆ.

**೨.೧.೫. ಜನಸಂಖ್ಯೆ**

೨೦೦೧ರ ಜನಗಣತಿಯ ಪ್ರಕಾರ ಕಣಕಟ್ಟೆ ಹೋಬಳಿಯ ಒಟ್ಟು ಜನಸಂಖ್ಯೆ ೨೨,೯೪೭. ಇದರಲ್ಲಿ ಪುರುಷರ ಸಂಖ್ಯೆ ೧೧,೫೪೭ ಇದ್ದರೆ ಮಹಿಳೆಯರ ಸಂಖ್ಯೆ ೧೧,೪೦೦. ಮಹಿಳೆಯರು[೧೪], ಪುರುಷರ ಸಂಖ್ಯೆಯಲ್ಲಿ ಅಲ್ಪವ್ಯತ್ಯಾಸದೊಂದಿಗೆ ಸಮವಾಗಿರುವುದನ್ನು ಕಾಣುತ್ತೇವೆ. ಈ ಪ್ರದೇಶದಲ್ಲಿ ನಗರ ವಾಸಿಗಳಿಗಿಂತ, ಗ್ರಾಮೀಣ ವಾಸಿಗಳೇ ಹೆಚ್ಚಾಗಿದ್ದಾರೆ. ಈ ಪ್ರದೇಶದಲ್ಲಿ ಎಲ್ಲಾ ವರ್ಗಕ್ಕೆ ಸೇರಿದ ಜನಗಳೂ ನೆಲೆಸಿದ್ದಾರೆ. ಮತ್ತು ಇಂದಿಗೂ ತಮ್ಮ ಕುಲಕಸುಬುಗಳನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ.

## ೨.೨. ಪ್ರಾಗಿತಿಹಾಸ

ಪ್ರಾಗಿತಿಹಾಸ ಕಾಲದ ಮಾನವನಿಗೆ ಓದು ಬರಹದ ಅಥವಾ ಅಕ್ಷರ ಜ್ಞಾನವಿರಲಿಲ್ಲ. ಸ್ವೇಚ್ಛಾ ಜೀವಿಯಾಗಿ ತನ್ನ ಮನಬಂದಂತೆ ಜೀವನ ಸಾಗಿಸುತ್ತಿದ್ದನು. ಅಲೆಮಾರಿಯಾಗಿದ್ದು ಆಹಾರವನ್ನು ಬೇಟೆಯಾಡಿ ಪಡೆಯುತ್ತಿದ್ದನು. ಇತಿಹಾಸಕಾಲದ ಮೊದಲಿನ ಯುಗವನ್ನು ಪ್ರಾಗಿತಿಹಾಸವೆಂದು ಕರೆಯಲಾಗಿದೆ. ಇದರಲ್ಲಿ ಹಳೆಯ ಶಿಲಾಯುಗ, ಮಧ್ಯಶಿಲಾಯುಗ, ಸೂಕ್ಷ್ಮಶಿಲಾಯುಗ, ನೂತನ ಶಿಲಾಯುಗ(ಶಿಲಾ ತಾಮ್ರಯುಗ) ಕಬ್ಬಿಣ–ಬೃಹತ್ ಶಿಲಾಯುಗವೆಂದು ವಿಂಗಡಿಸಲಾಗಿದೆ.

ಪ್ರಸ್ತುತ ಅಧ್ಯಯನದ ಕ್ಷೇತ್ರವಾದ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಕಣಕಟ್ಟೆ ಹೋಬಳಿ ಪ್ರದೇಶದ ಸುತ್ತಮುತ್ತಲ ಪ್ರದೇಶದಲ್ಲಿ ಸೂಕ್ಷ್ಮಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಗಳು ದೊರಕಿವೆ. ಸೂಕ್ಷ್ಮಶಿಲಾಯುಗ ಸಂಸ್ಕೃತಿ ಅಂದರೆ ಅಂತ್ಯ ಹಳೇ ಶಿಲಾಯುಗದ ನಂತರ ಹಾಗೂ ನೂತನ ಶಿಲಾಯುಗದ ಮುಂಚಿನ ಸಾಂಸ್ಕೃತಿಕ ಹಂತವಾಗಿ ಕಂಡುಬರುತ್ತದೆ. ಅರಸೀಕೆರೆ ಪರಿಸರದ ಬೆಟ್ಟನಹಳ್ಳಿಯಲ್ಲಿ ಸೂಕ್ಷ್ಮ ಶಿಲಾಯುಗ ಉಪಕರಣಗಳು ದೊರಕಿವೆ. ಬೃಹತ್ ಶಿಲಾಯುಗ ಸಂಸ್ಕೃತಿಯು ನೂತನ ಶಿಲಾಯುಗ ಸಂಸ್ಕೃತಿಯ ನಂತರ ಸಂಸ್ಕೃತಿ ಆಗಿದೆ. ಅರಸೀಕೆರೆ ತಾಲ್ಲೂಕಿನ ಚೆಲುವೆನಹಳ್ಳಿ, ತಳಲೂರು, ಬೊಮ್ಮನಹಳ್ಳಿಗಳಲ್ಲಿ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಕಪ್ಪು ಮತ್ತು ಕೆಂಪು ಮಡಿಕೆ ಚೂರುಗಳು ದೊರಕಿವೆ.[೧೫] ಈ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗ ಹಂತದಿಂದ ಬೃಹತ್ ಶಿಲಾಯುಗ ಸಂಸ್ಕೃತಿಯವರೆಗೂ ಹಲವು ನೆಲೆಗಳು ಉಪಕರಣಗಳು ದೊರಕಿವೆ. ಇದರಿಂದ ಮಾನವ ಆರಂಭದಿಂದ ಹಿಡಿದು ನಾಗರಿಕನಾದ ಹಂತದವರೆಗಿನ ಬದಲಾವಣೆಗಳನ್ನು ತಿಳಿಯಲು ಸಾಧ್ಯವಾಗಿದೆ.

### ೨.೨.೧. ಚರಿತ್ರೆ

ಮಾನವನ ವಿಕಸನದ ಹಂತದಲ್ಲಿ ಅಕ್ಷರಗಳ ಆವಿಷ್ಕಾರ ಬಹುಮುಖ್ಯವಾದ ಅಂಶವಾಗಿದೆ. ಅಕ್ಷರಗಳ ಆವಿಷ್ಕಾರದ ನಂತರದ ಹಂತವನ್ನು ಅಂದರೆ ಬರವಣಿಗೆಯು ಗೊತ್ತಾದ ನಂತರದ ಅವಧಿಯನ್ನು ಇತಿಹಾಸಕಾಲ ಎಂದು ಕರೆಯುತ್ತಾರೆ. ಪ್ರಸ್ತುತ ಇತಿಹಾಸ ಪ್ರಸಿದ್ಧವಾದ ಅರಸೀಕೆರೆ ತಾಲ್ಲೂಕಿನ ಕಣಕಟ್ಟೆ ಹೋಬಳಿಯಲ್ಲಿ ಶಾಸನಗಳು ದೊರೆಯುವ ಕಾಲದಿಂದ ಅಂದರೆ ತಲಕಾಡಿನ ಗಂಗರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು ಇವರವರೆಗೆ ಆಳ್ವಿಕೆ ನಡೆಸಿದ ವಿವಿಧ ರಾಜವಂಶಗಳ ಪರಿಚಯವನ್ನು ನಾವು ತಿಳಿಯಬಹುದಾಗಿದೆ.

ಯಾವುದೇ ನಿರ್ದಿಷ್ಟ ಪ್ರದೇಶದ ಸಾಂಸ್ಕೃತಿಕ ಇತಿಹಾಸದ ಅಧ್ಯಯನಕ್ಕೆ ಆ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜಕೀಯ ವಂಶಗಳ ಚರಿತ್ರೆಯು ಬೆನ್ನೆಲುಬಾಗಿದೆ. ರಾಜವಂಶಗಳ ಚರಿತ್ರೆ

ಇಲ್ಲದ ಅಧ್ಯಯನವನ್ನು ಕಲ್ಪಿಸಿಕೊಳ್ಳುವುದು ಕಷ್ಟಸಾಧ್ಯ. ರಾಜ ಮನೆತನಗಳು ಯಾವ ರೀತಿ ಆಡಳಿತ ನಡೆಸಿದವು ಎನ್ನುವುದನ್ನು ತಿಳಿಯಬೇಕು. ಅಂತೆಯೇ ಈ ಅಧ್ಯಯನದ ಪರಿಸರವು ಈ ಮೇಲ್ಕಂಡ ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಇಂತಹ ರಾಜಮನೆತನಗಳು ಆಳ್ವಿಕೆ ನಡೆಸಿರುವ ಪ್ರದೇಶಗಳಲ್ಲಿ ದೊರೆತಿರುವ ಶಾಸನಗಳು, ವೀರಗಲ್ಲುಗಳು, ಮಹಾಸತಿಕಲ್ಲುಗಳು ಮತ್ತು ಅವರು ನಿರ್ಮಿಸಿರುವ ದೇವಾಲಯಗಳು ಮುಂತಾದ ಪುರಾತತ್ವ ಅವಶೇಷಗಳು ಅಲ್ಲಿನ ಸಂಸ್ಕೃತಿಯನ್ನು ಪುನರ್‌ರಚಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.[೧೬]

ದಕ್ಷಿಣ ಕರ್ನಾಟಕದಲ್ಲಿ ಪ್ರಸಿದ್ಧವಾದ ಗಂಗ ಮಂಡಲ ಅಥವಾ ಗಂಗವಾಡಿ ೯೬೦೦೦ದಲ್ಲಿನ ನೀರ್ಗುಂದ ನಾಡು ಮಗರೆನಾಡು ಮತ್ತು ಅಸಂದಿ ನಾಡುಗಳಲ್ಲಿ ಪ್ರಸ್ತುತ ಅರಸೀಕೆರೆ ತಾಲ್ಲೂಕು ಸೇರಿರುವುದು ಇಲ್ಲಿನ ಶಾಸನಗಳಿಂದ[೧೭] ತಿಳಿದುಬರುತ್ತದೆ.

ನೀರ್ಗುಂದ ನಾಡು, ಗಂಗರು ಹಾಗೂ ಹೊಯ್ಸಳರ ಕಾಲಕ್ಕೆ ಪ್ರಮುಖ ಆಡಳಿತ ವಿಭಾಗವಾಗಿತ್ತು. ಇದು 'ನೀರ್ಗುಂದ ವಿಷಯ' 'ನೀರ್ಗುಂದ ೨೦೦' ಮತ್ತು ಹಿರಿಯ ನೀರ್ಗುಂದ ನಾಡೆಂದು ಪ್ರಸಿದ್ಧವಾಗಿತ್ತು. ಕ್ರಿ.ಶ.೫–೬ನೇ ಶತಮನಕ್ಕೆ ಸೇರಿದ ಅವಿನೀತಕೊಂಗುಣಿ ಮಹಾಧಿರಾಜನ ಕೊಂಡಂಚೆರುವು ಶಾಸನದಲ್ಲಿ ಗಂಗವಾಡಿ ೯೬೦೦೦ದ ಅನೇಕ ನಾಡುಗಳ ಸಾಲಿನಲ್ಲಿ ಮಗರೆ ನೀರ್ಗುನ್ದ ಇತ್ಯಾದಿಗಳ ಉಲ್ಲೇಖವಿದೆ. ಅರಸೀಕೆರೆ ಪ್ರದೇಶ, ಗಂಡಸಿ ಹೋಬಳಿ, ಕಣಕಟ್ಟೆ ಹೋಬಳಿ, ಸಾಲಗಾಮೆಯ ಗ್ರಾಮಗಳು ತಿಪಟೂರು ತಾಲ್ಲೂಕಿನ ಕೆಲವು ಗ್ರಾಮಗಳು ಈ ನೀರ್ಗುಂದ ಮುನ್ನೂರರ ಪರಿಧಿಯೊಳಗೆ[೧೮] ಬರುತ್ತದೆ.

ಮಗರೆನಾಡಿನ ಸ್ಪಷ್ಟ ಉಲ್ಲೇಖ ಕ್ರಿ.ಶ.೯೭೫ರ ಗಂಗ ನಾಲ್ಕನೇ ರಾಚಮಲ್ಲನ ಕೆರೆಗೋಡಿ ರಂಗಾಪುರ ಶಾಸನದಲ್ಲಿ ನೀರ್ಗುಂದ ನಾಡಿನೊಂದಿಗೆ ಬಂದಿದೆ. ಮಗರೆ ಮುನ್ನೂರರ ಅರಸೀಕೆರೆಯು ಹಿರೇಕಲ್ಲು ಬೆಟ್ಟಸಾಲಿನ ಎತ್ತರದ ಪ್ರದೇಶ. ಕಣಕಟ್ಟೆ ಹೋಬಳಿಯನ್ನು ತಿಪಟೂರು ತಾಲ್ಲೂಕಿನ ಉತ್ತರ ಭಾಗವನ್ನು ಕಡೂರು, ಬಾಣಾವರ, ಯಗಟಿ, ಸಿಂಗಟಗೆರೆ ಮುಂತಾದ ಕೆಲವು ಪ್ರದೇಶಗಳನ್ನು ಒಳಗೊಂಡಿತ್ತು. ಈ ಕಣಕಟ್ಟೆಯನ್ನು ಮಗರೆ ಮುನ್ನೂರರ ಮೊದಲು ಬಾಡವೆಂದು ಸುಮಾರು ಹತ್ತು ಶಾಸನಗಳು ಉಲ್ಲೇಖಿಸುತ್ತವೆ. ಹುಳಿಯಾರು ಮಗರೆ ನಾಡಿನ ರಾಜಧಾನಿ ಯಾಗಿತ್ತು.[೧೯]

**ತಲಕಾಡಿನ ಗಂಗರು**

ಈ ಪರಿಸರದಲ್ಲಿ ಆಡಳಿತ ನಡೆಸಿದ ಮೊದಲ ಅರಸರೆಂದರೆ ತಲಕಾಡಿನ ಗಂಗರು, ಸುಮಾರು ಆರು ಶತಮಾನಗಳಿಗೂ ಹೆಚ್ಚು ಕಾಲ ಕರ್ನಾಟಕದ ಬಹು ಭಾಗವನ್ನಾಳಿದ ಗಂಗರು

ಕರ್ನಾಟಕದ ಇತಿಹಾಸದಲ್ಲಿ ಚಿರಸ್ಥಾಯಿಯಾಗಿದ್ದಾರೆ. ಪಶ್ಚಿಮದಲ್ಲಿ ಕದಂಬರು ಪೂರ್ವದಲ್ಲಿ ಪಲ್ಲವರು ಈ ಎರಡು ರಾಜ್ಯಗಳ ಮಧ್ಯದಲ್ಲಿದ್ದ ಕರ್ನಾಟಕದ ದಕ್ಷಿಣ ಭಾಗವನ್ನು ಇವರು ಆಳುತ್ತಿದ್ದರು. ಕ್ರಿ.ಶ.ಸುಮಾರು ೩೫೦ರ ವೇಳೆಗಾಗಲೇ ಈ ವಂಶ ಅಸ್ತಿತ್ವಕ್ಕೆ ಬಂದಿತೆನ್ನಬಹುದು. ಈ ವಂಶದ ಸ್ಥಾಪಕ ದಡಿಗನಾಗಿದ್ದು, ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅದರ ಸುತ್ತಮುತ್ತಲ ಭಾಗವನ್ನು ಬಹುಕಾಲ ಆಳಿದರು. ಅವರ ಆಳ್ವಿಕೆಗೆ ಒಳಪಟ್ಟ ಭಾಗವೆಲ್ಲ ಗಂಗವಾಡಿ ಎಂದೇ ಹೆಸರಾಯಿತು.[೨೦]

ಅರಸೀಕೆರೆ ತಾಲ್ಲೂಕಿನಲ್ಲಿ ಗಂಗಪೂರ್ವದ ಯಾವುದೇ ಶಾಸನ ಕಂಡುಬಂದಿಲ್ಲ. ಕೊಂಗುಣಿ ಮಹಾರಾಜ ಶ್ರೀಪುರುಷನ ಕಾಲದ ಎರಡು ಶಾಸನಗಳು ನೀರ್ಗುಂದರಸನನ್ನು ಉಲ್ಲೇಖಿಸಿವೆ. ಅಸಂದಿನಾಡು ಗಂಗರ ಒಂದು ಪ್ರಮುಖ ಆಡಳಿತ ವಿಭಾಗವಾಗಿತ್ತು. ಕಡೂರು ತಾಲ್ಲೂಕಿನ ಅಸಂದಿಗ್ರಾಮವು ಇವರ ಕೇಂದ್ರವಾಗಿತ್ತು. ಗಂಗ ಶ್ರೀಪುರುಷನ ಮಗ ವಿಜಯಾದಿತ್ಯನು ೮ನೆಯ ಶತಮಾನದಲ್ಲಿ ಇಲ್ಲಿ ಆಡಳಿತ ನಡೆಸುತ್ತಿದ್ದನು.[೨೧] ಈ ಆಸಂದಿನಾಡು ನಮ್ಮ ಅಧ್ಯಯನದ ವ್ಯಾಪ್ತಿಗೆ ಬರುವ ಕಣಕಟ್ಟೆ ಪ್ರದೇಶವನ್ನು ಒಳಗೊಂಡಿತ್ತು.

ಇಮ್ಮಡಿ ರಾಜಮಲ್ಲ ಮತ್ತು ಎರೆಯಪ್ಪರಸ ಆಳುತ್ತಿದ್ದಾಗ ನೊಳಂಬರೊಂದಿಗೆ ಕದನಗಳು ನಡೆಯುತ್ತಿದ್ದುದನ್ನು ಈ ಪ್ರದೇಶದ ಶಾಸನಗಳು ಉಲ್ಲೇಖಿಸಿವೆ. ಅರಸೀಕೆರೆಯ ಶಾಸನವು ಅಸಂದಿನಾಡನ್ನು ಆಳುತ್ತಿದ್ದ ಸಾಮಂತ ಮುತ್ತರನು ನೊಳಂಬರೊಂದಿಗೆ ಕಣಕಟ್ಟೆಯಲ್ಲಿ ನಡೆಸಿದ ಯುದ್ಧದಲ್ಲಿ ಮಡಿದುದನ್ನು ಹೇಳುತ್ತದೆ. ಈ ಮುತ್ತರ ಬಲಿವಂಶ ತಿಲಕನಾಗಿದ್ದನು. ಇವನಿಗೆ ಭುವನಾದಿತ್ಯ ಮತ್ತು ಕಲಿಕಾಲ ಶೂದ್ರಕ ಎಂಬ ಬಿರುದುಗಳಿದ್ದವು.[೨೨] ಮಗರೆ ಮುನ್ನೂರರ ಮೊದಲ ಬಾಡವಾಗಿದ್ದ ಕಣಕಟ್ಟೆಯು ಆಯಕಟ್ಟಿನ ಜಾಗದಲ್ಲಿದ್ದು ಸದಾ ದಾಳಿಗೆ ತುತ್ತಾಗುತ್ತಿತ್ತು. ಗಂಗ ನೊಳಂಬರ ಸ್ನೇಹ ಹಳಸಿದ್ದು, ದ್ವೇಷಕ್ಕೆ ತಿರುಗಿತ್ತೆಂಬುದು ಇದರಿಂದ ತಿಳಿಯುತ್ತದೆ. ಹೀಗೆ ಕಣಕಟ್ಟೆ ಪ್ರದೇಶವು ತಲಕಾಡಿನ ಗಂಗರ ಪ್ರಮುಖವಾದ ಒಂದು ಆಯಕಟ್ಟಿನ ಪ್ರದೇಶವಾಗಿತ್ತೆಂಬುದನ್ನು ಇಲ್ಲಿ ದೊರೆಯುವ ಶಾಸನಗಳಿಂದ ತಿಳಿಯಬಹುದಾಗಿದೆ.

**ಕಲ್ಯಾಣ ಚಾಲುಕ್ಯರು**

ಕಲ್ಯಾಣ ಚಾಲುಕ್ಯರ ರಾಜ್ಯವನ್ನು ಎರಡನೇ ತೈಲಪನು ರಾಷ್ಟ್ರಕೂಟರನ್ನು ಕೊನೆಗಾಣಿಸುವ ಮೂಲಕ ಸ್ಥಾಪನೆ ಮಾಡಿದನು. ಇವರು ಪ್ರಾರಂಭದಲ್ಲಿ ಮಾನ್ಯಖೇಟದಲ್ಲಿಯೇ ರಾಜ್ಯಭಾರ ಮಾಡುತ್ತಿದ್ದು, ಅನಂತರ ಬೀದರ ಜಿಲ್ಲೆಯ ಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಈ ಮನೆತನದ ಪ್ರಸಿದ್ಧ ಅರಸ ೬ನೇ ವಿಕ್ರಮಾದಿತ್ಯನು ತನ್ನ ಸಾಮ್ರಾಜ್ಯವನ್ನು ದಕ್ಷಿಣ ಕರ್ನಾಟಕದವರೆಗೆ ವಿಸ್ತರಿಸಿದನು.[೨೩]

ಕಲ್ಯಾಣ ಚಾಲುಕ್ಯ ಅರಸರಾದ ಆರನೇ ವಿಕ್ರಮಾದಿತ್ಯ, ಅಹವಮಲ್ಲ, ಜಗದೇಕಮಲ್ಲ, ತ್ರಿಭುವನ ಮಲ್ಲರನ್ನು ಉಲ್ಲೇಖಿಸುವ ಶಾಸನಗಳು ವಿವಿಧ ಹೊಯ್ಸಳ ಅರಸರಿಗೆ ಸೇರಿದವಾಗಿದ್ದು, ಇದು ವಿಷ್ಣುವರ್ಧನನ ನಂತರ ಕೇವಲ ನಾಮಮಾತ್ರ ವಿಧೇಯತೆಯಾಗಿ ಕಂಡುಬರುತ್ತದೆ.[೨೪] ಈ ಶಾಸನಗಳೂ ಚಾಲುಕ್ಯರ ಬಗೆಗೆ ಯಾವ ಹೆಚ್ಚಿನ ಮಾಹಿತಿಯನ್ನು ನೀಡುವುದಿಲ್ಲ.

**ಹೊಯ್ಸಳರು**

ಕ್ರಿ.ಶ.೧೧ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಪ್ರಾಬಲ್ಯಕ್ಕೆ ಬಂದು ಸುಮಾರು ೩ ಶತಮಾನಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದವರೆಂದರೆ ಹೊಯ್ಸಳರು. ಯಾದವರಿಗೆ ಪ್ರಬಲ ವಿರೋಧಿಗಳಾಗಿ ದಕ್ಷಿಣದಲ್ಲಿ ಹೊಯ್ಸಳರು ತಲೆಯೆತ್ತಿದ್ದರು. ಯಾದವರನ್ನು ತಡೆದು ಕರ್ನಾಟಕದ ಸಾರ್ವಭೌಮತ್ವವನ್ನು ಪಡೆಯುವ ಶಕ್ತಿಯನ್ನು ಕ್ರಮೇಣ ಗಳಿಸಿ ಈ ನಾಡನ್ನಾಳಿದ ಪ್ರಮುಖ ರಾಜವಂಶಗಳಲ್ಲಿ ಒಂದಾಗಿ ಪರಿಣಮಿಸಿತು ಹೊಯ್ಸಳ ವಂಶ. ಗಂಗವಾಡಿಯ ಉತ್ತರಭಾಗದ ಗುಡ್ಡಗಾಡು ಪ್ರದೇಶ ಹೊಯ್ಸಳರ ಜನ್ಮಸ್ಥಾನ ಎನ್ನಬಹುದು. ಗಂಗವಾಡಿಯ ಉತ್ತರಭಾಗದ ಒಂದು ಮೂಲೆಯ್ಲಲಿ ಒಬ್ಬ ನಾಯಕ ತಲೆಯೆತ್ತಿದ್ದ ಅವನನ್ನೇ 'ಸಳ' ಎಂದು ಕರೆಯಲಾಗಿದೆ. 'ಸಸವೂರು' ಅಥವಾ 'ಶಶಕಪುರ' ಎಂಬುದು ಇವರ ಕಾರ್ಯಕ್ಷೇತ್ರದ ಕೇಂದ್ರವಾಗಿದ್ದಂತೆ ತೋರುತ್ತದೆ. ಸಳನ ನಂತರ ಬಂದ ನೃಪಕಾಮನೆಂಬುವವನಿಂದ ಹೊಯ್ಸಳರ ರಾಜಕೀಯ ಇತಿಹಾಸವನ್ನು ತಿಳಿಯಬಹುದಾಗಿದೆ.[೩೫]

ಪ್ರಸ್ತುತ ಅಧ್ಯಯನ ಪ್ರದೇಶವು ಹೊಯ್ಸಳರ ನೇರ ಆಳ್ವಿಕೆಗೆ ಒಳಪಟ್ಟಿತ್ತು ಎನ್ನುವುದನ್ನು ಇವರು ಕಟ್ಟಿಸಿರುವ ದೇವಾಲಯಗಳು ಮತ್ತು ಶಾಸನಗಳಿಂದ ತಿಳಿಯಬಹುದಾಗಿದೆ. ಹೊಯ್ಸಳರಿಗೆ ಸೇರಿದ ಹೆಚ್ಚಿನ ಶಾಸನಗಳು ಕಣಕಟ್ಟೆ ಪ್ರದೇಶವನ್ನು ಒಳಗೊಂಡಂತೆ ಅರಸೀಕೆರೆ, ಹಾಸನ, ಚಿಕ್ಕಮಗಳೂರು ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಿಗುತ್ತದೆ. ಪ್ರಾರಂಭದ ದೊರೆಗಳ ಉಲ್ಲೇಖ ಹೆಚ್ಚಾಗಿ ಕಂಡುಬರುವುದಿಲ್ಲ. ಹೊಯ್ಸಳರ ಪ್ರಸಿದ್ಧ ರಾಜರುಗಳಾದ ವಿಷ್ಣುವರ್ಧನ, ವೀರಬಲ್ಲಾಳ, ನರಸಿಂಹ, ಮುಮ್ಮಡಿ ನರಸಿಂಹ, ಮೂರನೇ ಬಲ್ಲಾಳರು ಈ ಮನೆತನದಲ್ಲಿ ಪ್ರಮುಖವಾಗಿ ಕಂಡುಬರುತ್ತಾರೆ.

ಹೊಯ್ಸಳರ ಕಾಲದಲ್ಲಿ ಈ ಪ್ರದೇಶವು ಆರ್ಥಿಕ ಸಮೃದ್ಧಿಯನ್ನು ಪಡೆದು ಇಮ್ಮಡಿ ಬಲ್ಲಾಳನ ಕಾಲದಲ್ಲಿ ತನ್ನ ವೈಭವದ ಪರಾಕಾಷ್ಠೆಯನ್ನು ಮುಟ್ಟಿತು. ಮೂಲತಃ ಮಲೆಪರಾದ ಹೊಯ್ಸಳರು ಪ್ರಬಲ ಮಾಂಡಲೀಕರಾಗಿ, ಚಕ್ರವರ್ತಿಗಳಾಗಿ ಉದಯಗೊಂಡ ಅವರ ಗೆಲುವಿನ ಚರಿತ್ರೆಯನ್ನು ಕಟ್ಟಿಕೊಡಲು ಈ ಪ್ರದೇಶದ ಅಪಾರ ಶಾಸನಗಳು ಸಹಾಯಕವಾಗಿವೆ.

ನೃಪಕಾಮನು ವಿನಯಾದಿತ್ಯನ ತಂದೆ ಎಂಬ ಉಲ್ಲೇಖವಷ್ಟೇ ಕರುಗುಂದ ಶಾಸನದಲ್ಲಿದೆ.[೨೬] ವಿನಯಾದಿತ್ಯನ ಕಾಲಕ್ಕೆ ಹೊಯ್ಸಳ ರಾಜ್ಯ ಕಣಕಟ್ಟೆ ಪ್ರದೇಶವನ್ನೊಳಗೊಂಡಂತೆ ಹಾಸನ, ಚಿಕ್ಕಮಗಳೂರು ಜಿಲ್ಲೆಗಳನ್ನು ಮೀರಿ ಬೆಳೆಯತೊಡಗಿತ್ತು. ಮಹಾಪ್ರಚಂಡ ದಂಡನಾಯಕನಾಗಿದ್ದ ಎಚಿಮಯ್ಯನ ಮಗ ಪೋಚಿಮಯ್ಯ ದಂಡನಾಯಕನು ಕೋಳಿಗುಂದವನ್ನು ಆಳುತ್ತಿದ್ದನು. ಅವರ ಭದ್ರತಾ ದಳದ ಸುಭಟರು ಒಂದು ದೇವಾಲಯ ನಿರ್ಮಿಸಿದ್ದಾರೆ.[೨೭]

ನೀರ್ಗುಂದನಾಡು ಹೊಯ್ಸಳ ರಾಜಧಾನಿಗೆ ಪೂರ್ವದ ಗಡಿಯಂತಿದ್ದು ಹೆಚ್ಚು ಸಂಪದ್ಭರಿತವಾಗಿತ್ತು. ಹಾಗೂ ಶ್ರೇಷ್ಠ ವಾಣಿಜ್ಯ ಪಟ್ಟಣಗಳನ್ನು ಹೊಂದಿತು.[೨೮]

ಎರೆಯಂಗನ ಕಾಲದಲ್ಲಿ ಅರಸೀಕೆರೆಯಲ್ಲಿ ಮೆಚ್ಚಿನ ಅಧಿಕಾರಿ ಕಚ್ಚಪೆರ್ಗಡೆ ಆಳುತ್ತಿದ್ದು, ಎರೆಯಂಗನ ರಾಣಿಯ ಹೆಸರಿನಲ್ಲಿ ಅರಸೀಕೆರೆಯನ್ನು ಕಟ್ಟಿಸಿದನು.[೨೯] ಮತ್ತು ಮೊಮ್ಮಗಳಾದ ಮಹಾದೇವಿಯು ಹೊಸವೂರಿನಲ್ಲಿ ಕೆರೆಯೊಂದನ್ನು ಕಟ್ಟಿಸುತ್ತಾಳೆ.[೩೦] ಎರೆಯಂಗನ ಮಕ್ಕಳಾದ ಬಲ್ಲಾಳ ವಿಷ್ಣುವರ್ಧನ ಮತ್ತು ಉದಯಾದಿತ್ಯನು ಪರಾಕ್ರಮಿಗಳೂ, ಸ್ವಾತಂತ್ರ್ಯ ಪ್ರಿಯರೂ ಆಗಿದ್ದು, ತಮ್ಮ ಬಲವನ್ನು ಈ ಪ್ರದೇಶದಲ್ಲಿ ಹೆಚ್ಚಿಕೊಳ್ಳತೊಡಗಿದರು. ಚಂಗಾಳ್ವರು ಅಳುಪರು ಉಚ್ಚಂಗಿ ಪಾಂಡ್ಯರ ಮೇಲೆ ಜಯಗಳಿಸಿಕೊಂಡರು. ಉದಯಾದಿತ್ಯನು ನೀರ್ಗುಂದ ನಾಡನ್ನು ಆಳ್ವಿಕೆ ಮಾಡುತ್ತಿದ್ದನು.

ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಅಸಂದಿ ಐನೂರು ಮತ್ತು ನೀರ್ಗುಂದ ಮುನ್ನೂರುಗಳನ್ನು ಅವನ ರಾಣಿ ಬಮ್ಮಲದೇವಿ ಆಳುತ್ತಿದ್ದಳು.[೩೧] ಮಗರೆ ಮುನ್ನೂರರ ಮೊದಲ ಬಾಡವಾದ ಕಣಕಟ್ಟೆಯ ಭಾಗವನ್ನು ಅರಸೀಕೆರೆಯ ಸಿಂಘರಸನು ಆಳುತ್ತಿದ್ದನು.[೩೨]

ಒಂದನೇ ನರಸಿಂಹನ ಕಾಲದಲ್ಲಿ ಕಲಚುರ್ಯರು ಕರ್ನಾಟಕದ ರಾಜಕೀಯದಲ್ಲಿ ಮೇಲುಗೈ ಪಡೆಯಲು ಪ್ರಯತ್ನಿಸಿದರು. ಈತನ ಕಾಲದಲ್ಲಿ ಪ್ರಸಿದ್ಧ ಮಹಾಪ್ರಧಾನರು ದಂಡನಾಯಕರು ಆಳಿದ್ದಾರೆ.[೩೩] ಪ್ರಸ್ತುತ ನಾನು ಅಧ್ಯಯನ ಕೈಗೊಂಡಿರುವ ಪ್ರದೇಶವನ್ನು ತನ್ನ ವ್ಯಾಪ್ತಿಗೆ ಒಳಪಡಿಸಿಕೊಂಡಿರುವ ಅರಸೀಕೆರೆಯನ್ನು ಇವರು ಆಳಿದ್ದಾರೆ. ಸಾಮಂತ ಗೋಯಿದೇವನು ಮಗರೆ ಮುನ್ನೂರನ್ನು ಆಳುತ್ತಿದ್ದನು.[೩೪]

ಇಮ್ಮಡಿ ವೀರಬಲ್ಲಾಳನು ಅಧಿಕಾರಕ್ಕೆ ಬಂದಾಗ ಇವನ ರಾಣಿಯರಾದ ಉಮಾದೇವಿ, ಜೋಳ ಮಹಾದೇವಿ, ಬಮ್ಮಲದೇವಿಯರು ಅರಸೀಕೆರೆ, ಹುಲಿಕಲ್ಲು ಭಾಗಗಳನ್ನು ಆಳುತ್ತಿದ್ದರು. ಉಮಾದೇವಿಯು ಅತ್ಯಂತ ಸಮರ್ಥ ಆಡಳಿತಗಾರ್ತಿಯಾಗಿದ್ದು, ಕಣಕಟ್ಟೆ ಪ್ರದೇಶವನ್ನೊಳಗೊಂಡ ಮಗರೆ ಮುನ್ನೂರು ನೀರ್ಗುಂದ ನಾಡಿನ ಕೆಲವು ಭಾಗಗಳನ್ನು ಆಳುತ್ತಿದ್ದಳು.[೩೫] ಬಮ್ಮಲದೇವಿಯ ತಂದೆ ಮಾಖರಿ ಲಖಯ್ಯನು ನೀರ್ಗುಂದ ನಾಡಿನ ಹುಲಿಕಲ್ಲಿನ ಪ್ರಭುವಾಗಿದ್ದನು.[೩೬] ಮಾವ

ಬಲ್ಲಾಳನು ಹಲಕೂರಿನ ಅಧಿಕಾರಿಯಾಗಿದ್ದನು.[೩೭]

ರಾಣಿ ಉಮಾದೇವಿಯ ತವರೂರಾಗಿದ್ದ ತೆಂಕಣ ಅಯ್ಯಾವಳೆ ಸರ್ವಜ್ಞಪುರಿ ಎಂಬ ಖ್ಯಾತಿಗೆ ಒಳಗಾಗಿದ್ದ ಅರಸೀಕೆರೆಯನ್ನು ಬಲ್ಲಾಳನು ಪ್ರಾಂತೀಯ ರಾಜಧಾನಿಯನ್ನಾಗಿ ಮಾಡಿಕೊಂಡು ಅದನ್ನು ತನ್ನ ಪಟ್ಟಾಭಿಷೇಕದಂದು ಜಯಗೊಂಡ ಬಲ್ಲಾಳಪುರವೆಂದು ಕರೆದುದಲ್ಲದೆ, ಅದರ ಸರ್ವತೋಮುಖ ಬೆಳವಣಿಗೆಗೆ ಕಾರಣನಾದನು. ಧಾರ್ಮಿಕ, ಆರ್ಥಿಕ, ರಾಜಕೀಯ ಪ್ರಾಮುಖ್ಯತೆಯನ್ನು ಪಡೆದ ಅರಸೀಕೆರೆ ಭಂಡಾರವಾಗಿ ಮೆರೆಯಿತು. ಈತನ ಕಾಲದಲ್ಲಿ ಈ ಪ್ರದೇಶವು ಅಭಿವೃದ್ಧಿಯ ಪರಾಕಾಷ್ಠೆಯನ್ನು ಮುಟ್ಟಿತು. ಮುಂದೆ ಇಮ್ಮಡಿ ನರಸಿಂಹ, ಸೋಮೇಶ್ವರ, ಮೂರನೇ ನರಸಿಂಹರು ಆಳುತ್ತಾರೆ.

ಮೂರನೇ ಬಲ್ಲಾಳನ ಏಳು ಶಾಸನಗಳು ದೊರೆತಿದ್ದು, ಕಲ್ಲುಗುಂಡಿಯ ಶಾಸನದಲ್ಲಿ ತುರುಕರ ಸೈನ್ಯ ಗೊರವನ ಕಲ್ಲಿನವರೆಗೆ ಅಂದರೆ ಕಣಕಟ್ಟೆ ಸಮೀಪ ಬಂದಾಗ ಲಿಂಗದಹಳ್ಳಿಯ ಮಾರಗೌಡ ಕಾದಿ ಕುದುರೆಯನ್ನು ಹಿಡಿದು ಬಲ್ಲಾಳ, ಕಾಮಯ್ಯ ದಂಡನಾಯಕರಿಂದ ಮೆಚ್ಚುಗೆಯಾಗಿ ಕಲ್ಲುಂಡಿ ಪ್ರದೇಶವನ್ನು ಪಡೆದ ವಿಚಾರವಿದೆ.[೨೮]

ಕಣಕಟ್ಟೆ ಪ್ರದೇಶವನ್ನೊಳಗೊಂಡಂತೆ ಅರಸೀಕೆರೆ ಪ್ರದೇಶವು ಹೊಯ್ಸಳರ ಎರಡನೇ ಬಲ್ಲಾಳನ ಕಾಲದಲ್ಲಿ ಅತ್ಯುತ್ತಮ ಆಡಳಿತ ವ್ಯವಸ್ಥೆಯನ್ನೊಂದಿದ್ದು, ಸಂಪದ್ಭರಿತವಾಗಿತ್ತು. ಮುಂದೆ ಈ ಪ್ರದೇಶ ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತು.

**ವಿಜಯನಗರ ಅರಸರು**

ವಿಜಯನಗರ ಸಾಮ್ರಾಜ್ಯದ ಸ್ಥಾಪನೆ, ದಕ್ಷಿಣ ಭಾರತದ ಇತಿಹಾಸದಲ್ಲಿ ಅದ್ವಿತೀಯವಾದ ಘಟನೆ. ಇಲ್ಲಿಯ ರಾಜಕೀಯ ಜೀವನದ ಸಂದಿಗ್ಧ ಪರಿಸ್ಥಿತಿಯಲ್ಲಿ ಈ ಸಾಮ್ರಾಜ್ಯದ ಆವಿರ್ಭಾವಾಯಿತು. ಈ ವೇಳೆಗೆ ಉತ್ತರ ಭಾರತ ಸಂಪೂರ್ಣವಾಗಿ ಮುಸ್ಲಿಮರ ಆಡಳಿತಕ್ಕೆ ಒಳಪಟ್ಟಿತಲ್ಲದೆ, ಅವರ ಹಿಡಿತ ದಕ್ಷಿಣದ ಕಡೆಗೂ ವ್ಯಾಪಿಸ ತೊಡಗಿತು. ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ಈ ಸಾಮ್ರಾಜ್ಯವನ್ನು ಸ್ಥಾಪನೆ ಮಾಡಿದರು. ಇವರು ದಕ್ಷಿಣ ರಾಜ್ಯಗಳಲ್ಲಿ ಉಂಟಾಗಿದ್ದ ಅನೈಕ್ಯತೆಯನ್ನು ಹೋಗಲಾಡಿಸಿ ಹಿಂದಿನಿಂದ ಬೆಳೆದು ಬಂದಿದ್ದ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರೆಸುವಲ್ಲಿ ಯಶಸ್ವಿಯಾದರು. ಹಂಪೆಯು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದು, ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿತ್ತು.[೩೯]

ಅರಸೀಕೆರೆ ಪರಿಸರವು ವಿಜಯನಗರ ಅರಸರ ಆಳ್ವಿಕೆಗೆ ಒಳಗಾಗಿರುವುದನ್ನು ಶಾಸನಾಧಾರ ಗಳಿಂದ ವಿಶ್ಲೇಷಿಸಬಹುದು. ಹಾಗೂ ಈ ಪ್ರದೇಶವು ಅನೇಕ ಸಣ್ಣ ಸಣ್ಣ ಸೀಮೆಗಳಾಗಿ ವಿಭಾಗಿಸಲ್ಪಟ್ಟಿತ್ತು. ಕ್ರಿ.ಶ.೧೩೭೮ರ ಅರಸೀಕೆರೆಯ ಶಾಸನವೊಂದು ಅರಸೀಕೆರೆಯನ್ನು

ಸರ್ವನಮಸ್ಯವಾದ ಪಿರಿಯಪಟ್ಟಣ ಮಹಾಗ್ರಹಾರ ಉದ್ಭವ ಸರ್ವಜ್ಞವೀರವಿಜಯ ಬಲ್ಲಾಳಪುರ ವೆಂದು ಕರೆದು ಮಲ್ಲಿಕಾರ್ಜುನ ದೇವಾಲಯಕ್ಕೆ ಮಹಾಜನರ ದಾನವನ್ನು ಹೇಳುತ್ತದೆ. ಅಂದರೆ ಈ ಕಾಲಕ್ಕೆ ಅರಸೀಕೆರೆ ಮತ್ತು ಅದರ ವ್ಯಾಪ್ತಿಗೆ ಒಳಪಟ್ಟ ಪ್ರದೇಶಗಳು ಸಣ್ಣ ಅಗ್ರಹಾರಗಳಾಗಿ ಹೊಯ್ಸಳ ವೀರ ಬಲ್ಲಾಳನ ಗತ ನೆನಪನ್ನು ಮಾತ್ರ ಉಳಿಸಿಕೊಂಡಿತು.[೪೦]

ಈ ಪ್ರದೇಶದಲ್ಲಿ ವಿಜಯನಗರ ಅರಸರ ಕಾಲದಲ್ಲಿ ನುಗ್ಗೇಹಳ್ಳಿ ಪಾಳೇಪಟ್ಟು, ಹೊನ್ನವಳ್ಳಿ ಸೀಮೆ, ಗರುಡನ ಗಿರಿಸೀಮೆ, ಕಣಕಟ್ಟೆ ಸೀಮೆ, ಬಾಣಾವರ ಸೀಮೆ ಮುಂತಾದ ವಿಭಾಗಗಳಾಗಿ ಕಂಡುಬರುತ್ತದೆ.

ಕೃಷ್ಣದೇವರಾಯನ ಕಾಲದಲ್ಲಿನ ಯಾವುದೇ ಶಾಸನಗಳು ಇಲ್ಲಿ ದೊರೆತಿಲ್ಲ. ಅಚ್ಯುತರಾಯ, ಅಮರನಾಯಕ ಬಯಕಾರ ರಾಮಪ್ಪ ಇವರಿಗೆ ಸಂಬಂಧಿಸಿದ ಎರಡು ಶಾಸನಗಳು ನಮ್ಮ ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ದೊರೆತಿದ್ದು, ಇದರಲ್ಲಿ ತುಳುವೇಂದ್ರ ತಿಮ್ಮನಿಂದ ಪ್ರಾರಂಭಿಸಿ, ಈಶ್ವರ, ನರಸಿಂಹ, ಕೃಷ್ಣದೇವರಾಯ ಅಚ್ಯುತರಾಯನವರೆಗೆ ತುಳುವ ವಂಶಾವಳಿ ನೀಡಿದೆ. ವಿಶೇಷವಾಗಿ ಅವರ ಪರಾಕ್ರಮ ಮತ್ತು ದಾನಗುಣಗಳನ್ನು ಹೊಗಳಿದೆ. ರಾಮರಾಯನ ಕುರಿತು ಕೋಳಿಗುಂದದ ಶಾಸನ ತಿಳಿಸಿದ್ದು ಈತ ದೇವಾಲಯವನ್ನು ಕಟ್ಟಿಸಿದ ಉಲ್ಲೇಖವಿದೆ.[೪೧]

## ಇತರೆ ನಾಯಕರು

ಪೆನುಗೊಂಡೆಯ ವಿಜಯನಗರ ಸಂತತಿಯ ಸಾಮಂತರಾಗಿದ್ದ ಬೇಲೂರಿನ ನಾಯಕರು, ಚಿತ್ರದುರ್ಗ ನಾಯಕರು, ತರೀಕೆರೆ ಪಾಳೇಗಾರರು ಕೆಳದಿಯ ಅರಸರು ಕಾಲಕಾಲಕ್ಕೆ ಈ ಪ್ರದೇಶದ ಮೇಲೆ ಹಿಡಿತ ಸಾಧಿಸಿ ಆಳ್ವಿಕೆ ಮಾಡಿದ್ದಾರೆ. ದುರ್ಗದ ರಂಗಪ್ಪನಾಯಕರು ನನ್ನ ಅಧ್ಯಯನದ ವ್ಯಾಪ್ತಿಗೆ ಒಳಪಡುವ ಸೊಪ್ಪಿನಹಳ್ಳಿ ಎಂಬ ಗ್ರಾಮವೊಂದನ್ನು ತಿರುವೆಂಗಳಯ್ಯ ನೆಂಬುವವನಿಗೆ ದಾನ ನೀಡಿದ್ದು ಆತ ಅದನ್ನು ಬೇಲೂರು ಚೆನ್ನಿಗರಾಯನಿಗೆ ಸಮರ್ಪಿಸಿದನೆಂದು ಕ್ರಿ.ಶ. ೧೬೫೬ರ ಸೊಪ್ಪಿನಹಳ್ಳಿ ಶಾಸನ ದಾಖಲಿಸಿದೆ.[೪೨] ಚಿಕ್ಕಕೆಂಗಹನುಮಪ್ಪನ ಆಳ್ವಿಕೆಗೆ ಬಾಣಾವರ, ಗರುಡನಗಿರಿ, ಹಾರನಹಳ್ಳಿ ಹೊಳಲ್ಕೆರೆ ಸೀಮೆಗಳು ಒಳಪಟ್ಟಿದ್ದವೆಂದು ಶಾಸನಗಳು ದಾಖಲಿಸಿವೆ.

## ಮೈಸೂರು ಒಡೆಯರು

ಹೊಯ್ಸಳರ ಕಾಲದಿಂದಲೂ ಪ್ರಮುಖ ವಾಣಿಜ್ಯ ಕೇಂದ್ರವಾಗಿದ್ದ ಬಾಣಾವರವನ್ನು ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ಇವರ ಹೆಸರಿನಲ್ಲಿ ಕಂಠೀರಾಯಪೇಟೆ ಎಂಬ ಸಂತೇಮಾಳವನ್ನು ಸ್ಥಾಪಿಸಲಾಯಿತು. ಇಲ್ಲಿ ಮೈಸೂರು ಒಡೆಯರು ಆಳ್ವಿಕೆ ನಡೆಸಿರುವುದಕ್ಕೆ ಅನೇಕ ಶಾಸನಗಳು ದೊರಕಿವೆ.[೪೩] ದೇವರಾಜ ಒಡೆಯರು ಇಲ್ಲಿ ಗಿರಿದುರ್ಗವೊಂದನ್ನು

ಕಟ್ಟಿಸಿದರೆಂದು ಸು. ೧೦೫೭ ಮೀಟರ್. ಎತ್ತರದಲ್ಲಿರುವ ಈ ಗಿರಿಯ ನೆತ್ತಿಯು ರಾಜ್ಯದ ಗಡಿ ರಕ್ಷಣೆಗೆ ಕಾವಲು ನೆಲೆಯಾಗಿದ್ದು ಮುಂದೆ ಈ ಗಿರಿಯು ಗರುಡನಗಿರಿ ಎಂದೇ ಪ್ರಸಿದ್ಧವಾಯಿತು.

೧೬೯೦ರಲ್ಲಿ ಚಿಕ್ಕದೇವರಾಜ ಒಡೆಯರು ಈ ಪ್ರಾಂತ್ಯವನ್ನು ಆಳುತ್ತಿದ್ದರು.[೪೪] ೨ನೇ ಕೃಷ್ಣರಾಜ ಒಡೆಯರ ಕಾಲದಲ್ಲಿ ಗರುಡನಗಿರಿ, ಬಾಣಾವರ ಸೀಮೆ ಕಣಕಟ್ಟೆ, ಜಾವಗಲ್ಲುಗಳು ಇವರ ಅಧೀನದಲ್ಲಿ ಆಡಳಿತಕ್ಕೆ ಒಳಗಾಗಿದ್ದವು.

## ಹೈದರ್ ಮತ್ತು ಟಿಪ್ಪುಸುಲ್ತಾನ್

ಕ್ರಿ.ಶ. ೧೭೬೦ರ ಹೊತ್ತಿಗೆ ಪ್ರಸ್ತುತ ಪ್ರದೇಶವು ಪಾಳೆಗಾರರಿಂದ ಹೈದರನ ಕೈ ಸೇರಿತು. ಹೈದರನು ಹಿರೇಕಲ್ಲು ಬೆಟ್ಟದಲ್ಲಿನ ನಾಗಪುರಿಯಲ್ಲಿ ಒಂದು ನಗರ ನಿರ್ಮಿಸಿ ಕೋಟೆಯನ್ನು ನಿರ್ಮಿಸಿದನು. ಬಾಣಾವರದಿಂದ ಜನರನ್ನು ಎತ್ತಿಸಿ ಗರುಡನಗಿರಿಯಲ್ಲಿ ನೆಲೆಸುವಂತೆ ಮಾಡಿದನಾದರೂ ಹೊಸ ಸ್ಥಳದ ಅನಾರೋಗ್ಯ ವಾತಾವರಣದಿಂದ ಜನರು ಮತ್ತೆ ವಾಪಸ್ಸಾದರು. ಟಿಪ್ಪುವಿನ ಕಾಲದಲ್ಲಿ ಬಾಣಾವರ ಕೋಟೆ, ಗರುಡನಗಿರಿ ಕೋಟೆಗಳು ಬಲಗೊಂಡು ಸೈನ್ಯದ ಠಾಣ್ಯವಾಗಿದ್ದವೆಂದು ತಿಳಿದುಬರುತ್ತದೆ.[೪೫]

## ಅಡಿಟಿಪ್ಪಣಿಗಳು

೧. ಕನ್ನಡ ರತ್ನಕೋಶ, (ಪರಿಷ್ಕೃತ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧

೨. ಅಂತರ್ಜಾಲದಿಂದ ಪಡೆದ ಮಾಹಿತಿ http//www.google.com en-wicipedic.org-wiki/kanakatte

೩. ವಕ್ತೃ ಸತೀಶ್ ಅವರಿಂದ ಪಡೆದ ಮಾಹಿತಿ.

೪. ಹನುಮನಾಯಕ, ಅರಸೀಕೆರೆ ತಾಲ್ಲೂಕಿನ ಎರಡು ಅಪ್ರಕಟಿತ ಶಾಸನವುಳ್ಳ ವೀರಗಲ್ಲುಗಳು, ಇತಿಹಾಸ ದರ್ಶನ, ಸಂ. ೧೧, ಪು.೯೩-೯೬

೫. ಅಂತರ್ಜಾಲದಿಂದ ಪಡೆದ ಮಾಹಿತಿ http//www.google.com en-wicipedic.org-wiki/kanakatte

೬. ಹನುಮನಾಯಕ, ಪೂರ್ವೋಕ್ತ, ಪು.೯೩-೯೬

೭. ಅರಸೀಕೆರೆ ತಹಶೀಲ್ದಾರ್ ಕಛೇರಿಯಿಂದ ಪಡೆದ ಮಾಹಿತಿ.

೮. ಅಂತರ್ಜಾಲದಿಂದ ಪಡೆದ ಮಾಹಿತಿ http//www.google.com en-wicipedic.org-

wiki/kanakatte

೯. ಅರಸೀಕೆರೆ ತಹಶೀಲ್ದಾರ್ ಕಛೇರಿಯಿಂದ ಪಡೆದ ಮಾಹಿತಿ.

೧೦. ಅದೇ

೧೧. ಅರಸೀಕೆರೆ ತೋಟಗಾರಿಕೆ ಇಲಾಖೆಯಿಂದ ಪಡೆದ ಮಾಹಿತಿ

೧೨. ಅರಸೀಕೆರೆ ಜಲನಯನ ಇಲಾಖೆಯಿಂದ ಪಡೆದ ಮಾಹಿತಿ

೧೩. ಅದೇ

೧೪. Census of India 2001, Karnataka state Hassan District

೧೫. ಶಿವತಾರಕ್ ಕೆ.ಬಿ., ಹಾಸನ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ, ಪು.೬೪೬

೧೬. ದಾಸಪ್ಪ ಎನ್., ಕೋರ ಹೋಬಳೀ ಪರಿಸರದ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಎಂ.ಫಿಲ್.ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ), ೨೦೧೦, ಪು.೨೫

೧೭. ಲಲಿತಾಂಬ ಎನ್.ಆರ್., ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ, ಪು.೧೮

೧೮. ಅದೇ, ಪು.೧೮

೧೯. ಅದೇ, ಪು.೧೯

೨೦. ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೯೦

೨೧. ಲಲಿತಾಂಬ ಎಲ್.ಆರ್., ಪೂರ್ವೋಕ್ತ, ಪು.೧೯

೨೨. ಎ.ಕ.(ಸಂ).೧೦.(ಪರಿ), ಶಾ.ಸಂ.೩೧೬, ಅರಕೆರೆ, ಪು.೩೮೭

೨೩. ತಿಪ್ಪೇರುದ್ರಸ್ವಾಮಿ ಹೆಚ್., ಪೂರ್ವೋಕ್ತ, ಪು.೯೩

೨೪. ಲಲಿತಾಂಬ ಎನ್.ಆರ್., ಪೂರ್ವೋಕ್ತ, ಪು.೨೧

೨೫. ತಿಪ್ಪೇರುದ್ರಸ್ವಾಮಿ ಹೆಚ್., ಪೂರ್ವೋಕ್ತ, ಪು.೧೨೭-೧೨೮

೨೬. ಎ.ಕ., ಸಂ.೧೦.(ಪರಿ), ಶಾ.ಸಂ. ೨೪೧, ಕರುಗುಂದ, ಪು.೩೦೭

೨೭. ಅದೇ, ಶಾ.ಸಂ.೩೧೧, ಕೋಳಿಗುಂದ, ಪು.೩೭೫

೨೮. ಲಲಿತಂಬ ಎನ್.ಆರ್., ಪೂರ್ವೋಕ್ತ, ಪು.೨೧

೨೯. ಅದೇ, ಪು.೨೨

೩೦. ಅದೇ, ಪು.೨೩

೩೧. ಎ.ಕ., ಪೂರ್ವೋಕ್ತ, ಶಾ.ಸಂ.೬೩, ಕಲ್ಲುಗುಂಡಿ, ಪು.೯೨

೩೨. ಅದೇ, ಶಾ.ಸಂ.೭೩, ಕಣಕಟ್ಟೆ, ಪು.೯

೩೩. ಅದೇ, ಶಾ.ಸಂ.೨೪೧, ಕರುಗುಂದ, ಪು.೩೦೭

೩೪. ಅದೇ, ಶಾ.ಸಂ.೯೫, ಕಣಕಟ್ಟೆ, ಪು.೧೨೪

೩೫. ಅದೇ, ಶಾ.ಸಂ.೧೧೪, ಕಿತ್ತನಕೆರೆ, ಪು.೧೪೮

೩೬. ಅದೇ, ಶಾ.ಸಂ.೨೩, ಸಣ್ಣೇನಹಳ್ಳಿ, ಪು.೧೮೮

೩೭. ಅದೇ, ಶಾ.ಸಂ.೯೬, ಹಲಕೂರು, ಪು.೧೨೬

೩೮. ಅದೇ, ಶಾ.ಸಂ.೬೨, ಕಲ್ಲುಗುಂಡಿ, ಪು.೯೧

೩೯. ತಿಪ್ಪೇರುದ್ರಸ್ವಾಮಿ ಹೆಚ್., ಪೂರ್ವೋಕ್ತ, ಪು.೧೩೭-೧೩೮

೪೦. ಎ.ಕ., ಪೂರ್ವೋಕ್ತ, ಪು.೪೫೭

೪೧. ಅದೇ, ಶಾ.ಸಂ.೧೧೯, ಸೊಪ್ಪಿನಹಳ್ಳಿ, ಪು.೧೫೬

೪೨. ಲಲಿತಾಂಬ ಎನ್.ಆರ್., ಪೂರ್ವೋಕ್ತ, ಪು.೩೦

೪೩. ಅದೇ, ಪು.೩೦

೪೪. ಅದೇ, ಪು.೩೦

೪೫. ಅದೇ, ಪು.೩೦-೩೧

## ಅಧ್ಯಾಯ ಮೂರು

# ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

೧.೧. ದೇವಾಲಯಗಳು

೧.೨. ಶಿಲ್ಪಗಳು

೧.೩. ಶಾಸನಗಳು

೧.೪. ಇತರೆ ಆವಶೇಷಗಳು

# ಅಧ್ಯಾಯ ಮೂರು

# ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

## ೩.೧. ದೇವಾಲಯಗಳು

ದೇವಾಲಯಗಳು ನಮ್ಮ ದೇಶದ ಸಾಂಸ್ಕೃತಿಕ ಆಸ್ತಿ. ಜಾತಿ ಮತಪಂಥಗಳ ಸಂಕುಚಿತ ಅರ್ಥವನ್ನು ಮೀರಿದ, ದೇಶದ ಜನಪದದ ಸಾಂಸ್ಕೃತಿಕ ಪರಂಪರೆಯ ಪ್ರತೀಕಗಳಾಗಿ ದೇವಾಲಯಗಳು ನಮ್ಮೆದುರಿಗೆ ಇದೆ. ಆಸ್ತಿಕರಿಗೆ ದೇವಸ್ಥಾನಗಳು ಶ್ರದ್ಧಾಕೇಂದ್ರಗಳು. ಅವರವರ ನಂಬಿಕೆಗೆ ಅನುಸಾರವಾಗಿ ಹರಿ, ಹರ, ದೇವಿಯರ ಗುಡಿಗಳು, ಬಸದಿಗಳು ರೂಪುಗೊಂಡವು. ಜಿಜ್ಞಾಸೆಗಳಿಗೆ ಇದೇ ಕೇಂದ್ರಗಳು. ಸಂಸ್ಕೃತಿಯ ಭಂಡಾರ, ಚರಿತ್ರೆಯ ಕೊಂಡಿಗಳು. ಜನಜೀವನಕ್ಕೆ ಆದರ್ಶದ ಮೂಲಗಳಾಗಿ ಗೋಚರಿಸುತ್ತದೆ. ಹೀಗಾಗಿ ದೇವಾಲಯದ ಶಿಲ್ಪಗಳು ಸಾರುವ ಸಂದೇಶ, ಶಿಲಾಶಾಸನಗಳಿಂದ ಐತಿಹಾಸಿಕ ಮಾಹಿತಿಗಳು ಯಾವುದೇ ದೇಶಕ್ಕೆ ಅಮೂಲ್ಯ ಆಸ್ತಿ.[೧]

ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ನೆಲೆಯಾಗಿ ನಿಲ್ಲಬೇಕೆಂದೂ, ಒಂದು ಸುರಕ್ಷಿತ ಗೂಡಿನಲ್ಲಿ ವಾಸಿಸಬೇಕೆಂದೂ ಎಂದಿನಿಂದ ಬಯಸಿದನೋ, ಅಂದಿನಿಂದ ತನಗಾಗಿ 'ಮನೆ'ಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ. ಸುತ್ತಗೋಡೆ ಅದರ ಮೇಲೆ ವಿವಿಧ ಆಕಾರದ ಮುಚ್ಚಿಗೆ ಮುಂಭಾಗದಲ್ಲಿ ಬಾಗಿಲು, ಅದರ ಮೇಲೆ ಗಾಳಿ–ಬೆಳಕು ಬರಲು ಕಮಾನು ತೆರವು. ಹೀಗೆ ಅವನ ಮನೆ ರೂಪುಗೊಂಡಿತು. ಇದು ವಾಸ್ತುಶಿಲ್ಪದ ಪ್ರಾಥಮಿಕ ಹೆಜ್ಜೆ.[೨]

ಮಾನವನ ಶಕ್ತಿಗೆ ಮೀರಿದ ನಮ್ಮನ್ನು ತಂತಾನೇ ನಿಯಂತ್ರಿಸುವ ಬೇರೆಯದೇ ಆದ ಶಕ್ತಿ ಬಗ್ಗೆ ಪ್ರತಿಯೊಬ್ಬ ಜೀವಿಯ ಅರಿವಿಗೂ ಬರುತ್ತಿದ್ದು, ಜೊತೆಗೆ ಪ್ರಾಣಿ, ಮಳೆ, ಗುಡುಗು, ಸಿಡಿಲು ಮುಂತಾದ ಪ್ರಕೃತಿಯ ಶಕ್ತಿಗಳಿಂದ ಭಯಭೀತನಾಗಿ ತನ್ನ ರಕ್ಷಣೆಗಾಗಿ ದೇವರ ಮೊರೆ

ಹೋಗತೊಡಗಿದನು. ಎಲ್ಲಕ್ಕಿಂತಲೂ ಮಿಗಿಲಾಗಿ ದೇವರು ಎಂಬ ಅದ್ಭುತ ಶಕ್ತಿ ಇದೆ ಎಂಬ ನಂಬಿಕೆಯುಂಟಾಗಿ ಆ ಶಕ್ತಿಯ ಮೇಲಿನ ಭಯದಿಂದ ಅಥವಾ ಪ್ರೇಮದಿಂದ ಹಾಗೂ ಸಹಜ ಕುತೂಹಲದಿಂದ ನಿಸರ್ಗದ ರಹಸ್ಯಗಳನ್ನು ಅರಿಯಲು ಮುಂದಾದನು. ಅಷ್ಟೇ ಅಲ್ಲದೆ ನಿಸರ್ಗ ಶಕ್ತಿಗಳನ್ನು ಪವಿತ್ರ ಪೂಜಾರ್ಹ, 'ಆಶ್ಚರ್ಯವತ್‌ಪಶ್ಯತಿ' ಎಂದು ಭಾವಿಸಿ ಆರಾಧಿಸಲು ಪ್ರಾರಂಭಿಸಿದನು. ಇದರಿಂದ ಅಂತಹ ಅಗೋಚರ ಶಕ್ತಿಗೆ ಒಂದು ರೂಪ ನೀಡಿ, ಅದನ್ನು ಪ್ರತಿಮೆಯನ್ನಾಗಿಸಿ ಪೂಜಿಸುವ ಪದ್ಧತಿ ಪ್ರಾರಂಭವಾಯಿತು. ಕ್ರಮೇಣ ಇಂತಹ ಪವಿತ್ರ ಸ್ಥಳಕ್ಕೆ ಬೇರೆ ಯಾರೂ ಅಜಾಗರೂಕರಾಗಿ ಓಡಾಡುವುದನ್ನು ನಿಷೇಧಿಸಿ, ಅದಕ್ಕೆ ರಕ್ಷಣೆಯನ್ನು ಒದಗಿಸಬೇಕೆಂದು ದೇವಾಲಯಗಳ ರಚನೆ ಪ್ರಾರಂಭವಾಯಿತು.[೩]

ತನಗಾಗಿ ಕಟ್ಟಿಕೊಂಡ ಮನೆ 'ಗೃಹವಾಸ್ತುಶಿಲ್ಪ' ಎನಿಸಿದರೆ, ತನ್ನ ದೇವರಿಗಾಗಿ ಕಟ್ಟಿದ್ದು 'ಧಾರ್ಮಿಕ ವಾಸ್ತುಶಿಲ್ಪ' ಅಥವಾ ದೇವಾಲಯ ವಾಸ್ತುಶಿಲ್ಪ' ಎನಿಸಿತು.[೪] ಇಂದಿಗೂ ಕೂಡ ಸ್ಥಳೀಯ ಚರಿತ್ರೆ ರಚನೆಗೆ ಸಹಾಯಕವಾಗಿರುವ ಆಕರಗಳಲ್ಲಿ ದೇವಾಲಯಗಳು ಅತ್ಯಂತ ಮಹತ್ವವನ್ನು ಪಡೆದುಕೊಂಡಿವೆ. ಇಂತಹ ದೇವಾಲಯಗಳ ಅಧ್ಯಯನದಿಂದ ಸಂಸ್ಕೃತಿ, ಅದರ ಕಲೆ, ವಾಸ್ತುಶಿಲ್ಪ, ಮೂರ್ತಿಶಿಲ್ಪ, ರಾಜಾಶ್ರಯ, ದತ್ತಿ, ಧರ್ಮ, ಸಾಂಸ್ಕೃತಿಕವಾದ ಹಬ್ಬ ಹರಿದಿನಗಳು, ಜಾತ್ರೆ ಮತ್ತು ಉತ್ಸವಗಳು, ಸಂಗೀತ ಶಿಕ್ಷಣ, ನ್ಯಾಯಿಕವಾದ ಅಂಶಗಳನ್ನು ತಿಳಿಯಲು ಸಹಾಯಕವಾಗಿದೆ.

ಪ್ರಸ್ತುತ ಅಧ್ಯಯನ ಪರಿಸರದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳಿಂದ ಅನೇಕ ರಚನಾತ್ಮಕ ದೇವಾಲಯಗಳು ನಿರ್ಮಾಣಗೊಂಡಿದ್ದು, ಆ ರಾಜ ಮನೆತನಗಳ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ.

### ೩.೧.೧. ವಾಸ್ತುಶಿಲ್ಪದ ಪ್ರಾಚೀನತೆ

ಗರುಡ ಪುರಾಣವು ಗ್ರಾಮಗಳು, ನಗರಗಳು, ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು ಹೇಳಿದೆ.[೫] "ನಿವಾಸಾತ್ ಸರ್ವ ಭೂತಾನಾಂ ವಾಸ್ತುರಿತಿ ಶಬ್ದಿತಃ" ಎಲ್ಲ ಪ್ರಾಣಿಗಳ ವಸತಿಗಾಗಿ ವಾಸ್ತು ಪದವು ಬಳಕೆಗೊಂಡಿದೆ. ಇದು ಅಮರಕೋಶದ ವ್ಯಾಖ್ಯೆ. ಮಯಮತ ಗ್ರಂಥವು ವಾಸ್ತುಶಬ್ಧವನ್ನು ಎರಡು ಹಂತಗಳಲ್ಲಿ ವಿವರಿಸಿದೆ.

ಅಮರ್ತ್ಯಾಶ್ಚೈವ ಮರ್ತ್ಯಾಶ್ಚಯತ್ರ ಯತ್ರ ವಸಂತಿ ಹಿ ತದ್ವಸ್ತು ಇತಿ ಮತಂ– ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ವಸ್ತುವನ್ನು ಆಶ್ರಯಿಸಿದ್ದು ವಾಸ್ತು. 'ಪ್ರಾಸಾದಾದೀನಿ ವಾಸ್ತೂನಿ ವಸ್ತುತ್ವಾತ್ ವಸ್ತು ಸಂಶ್ರಯಾತ್' ಪ್ರಸಾದ, ಹರ್ಮ್ಯ, ಸೌಧ

ಇತ್ಯಾದಿಗಳು ವಸ್ತುವನ್ನು ಆಶ್ರಯಿಸಿದ್ದು, ವಾಸ್ತು ಎಂದೆನಿಸಿಕೊಳ್ಳುತ್ತದೆ. ಆದ್ದರಿಂದ 'ವಾಸ್ತು' ಎಂದಲ್ಲಿ ವಸತಿ ಯೋಗ್ಯ ಭೂಮಿ ಹಾಗೂ ಆ ಭೂಮಿಯ ಮೇಲೆ ನಿಂತ ಕಟ್ಟಡ ಎರಡನ್ನೂ ಒಳಗೊಳ್ಳುತ್ತದೆ.[೬]

ಪ್ರಸ್ತುತ ಅಧ್ಯಯನ ವ್ಯಾಪ್ತಿಯಾದ ಕಣಕಟ್ಟೆ ಹೋಬಳಿಯಲ್ಲಿ ಕಂಡುಬರುವ ದೇವಾಲಯಗಳನ್ನು ಅಧ್ಯಯನ ಮಾಡುವುದಕ್ಕಿಂತ ಮುಂಚೆ ವಿವಿಧ ಕಾಲಘಟ್ಟದಲ್ಲಿ ದೇವಾಲಯಗಳು ವಿಕಾಸ ಹೊಂದಿದ ರೀತಿಯನ್ನು ತಿಳಿದುಕೊಳ್ಳಬೇಕಾಗುತ್ತದೆ. ಸಾಮಾನ್ಯವಾಗಿ ದೇವಾಲಯ ಧಾರ್ಮಿಕ ಶ್ರದ್ಧೆ, ನಂಬಿಕೆ, ಭಕ್ತಿಯ ಸಂಕೇತಗಳಾಗಿವೆ. ದೇವಾಲಯವನ್ನು ದೇವ+ಆಲಯ ಎಂದು ಬಿಡಿಸಿದಾಗ ದೇವ ಎಂದರೆ ದೇವರು, ಆಲಯ ಎಂದರೆ ಕಟ್ಟಡ ಎಂದರ್ಥ. ಅಂದರೆ ದೇವರು ವಾಸಿಸಲು ಇರುವ ಜಾಗ, ಸ್ಥಾನ, ಎಡೆ ಎಂದರ್ಥವಾಗುತ್ತದೆ.[೭]

ಸಾಮಾನ್ಯವಾಗಿ ಎಲ್ಲ ಕಲೆಗಳಿಗೂ ಹೇಳುವಂತೆ ವಾಸ್ತುಶಿಲ್ಪಕ್ಕೂ ನಮ್ಮ ಶಾಸ್ತ್ರಗ್ರಂಥಗಳು ದೈವಿಕವಾದ ಮೂಲವನ್ನೇ ಹೇಳುತ್ತವೆ. ವಾಸ್ತುಶಿಲ್ಪದ ಹುಟ್ಟನ್ನು 'ಮಾನಸಾರ' ನಿರ್ದೇಶಿಸುವ ರೀತಿ ಹೀಗಿದೆ. ಬ್ರಹ್ಮನ ನಾಲ್ಕು ಮುಖಗಳಿಂದ ವಿಶ್ವಕರ್ಮ, ಮಯ, ತ್ವಷ್ಟೃ ಮತ್ತು ಮನು ಹುಟ್ಟಿದರು. ಇವರ ನಾಲ್ಕು ಜನ ಮಕ್ಕಳು ಕ್ರಮವಾಗಿ ಸ್ಥಪತಿ, ಸೂತ್ರಗ್ರಾಹಿ, ವರ್ಧಕಿ ಮತ್ತು ತಕ್ಷಕ ಎಂಬುವರು. ಇವರಿಂದ ವಾಸ್ತುಕಲೆ ಬೆಳೆಯಿತು ಎನ್ನುತ್ತದೆ ಮಾನಸಾರ.

ಆದಿಮಾನವ ಗುಹೆಗಳಲ್ಲಿಯೂ, ಮರದ ಪೊಟರೆಗಳಲ್ಲಿಯೂ ವಾಸಿಸುತ್ತಿದ್ದು, ವಾಸಕ್ಕೆ ಅನುಕೂಲವಾದ ಮನೆಗಳನ್ನು ಕಟ್ಟಿಕೊಳ್ಳುವುದನ್ನು ಕಲಿತಾಗ, ನಾಗರೀಕತೆಯ ಜೀವನದಲ್ಲಿ ಬಹುದೊಡ್ಡ ಹೆಜ್ಜೆಯನ್ನು ಇಟ್ಟಂತಾಯಿತು. ಕ್ರಮೇಣ ಅವನ ಅನುಭವ ಬೆಳೆದಂತೆ, ಸನ್ನಿವೇಶಗಳು ಬದಲಾದಂತೆ, ಕಟ್ಟಡಗಳ ನಿರ್ಮಾಣದಲ್ಲಿ ಕೇವಲ ಉಪಯುಕ್ತತೆಯ ಜೊತೆಗೆ ಸೌಂದರ್ಯ ದೃಷ್ಟಿಯೂ ಬೆಳೆಯತೊಡಗಿತು. ಜಗತ್ತಿನ ಅತಿ ಪ್ರಾಚೀನವಾದ ನಾಗರೀಕತೆಗಳನ್ನು ಉದಾಹರಣೆಗೆ ಈಜಿಪ್ಟ್, ಗ್ರೀಕ್, ರೋಮ್ ಮತ್ತು ಸಿಂಧೂ ಇತ್ಯಾದಿಗಳಲ್ಲಿ ಬೆಳೆದುಬಂದ ಕಟ್ಟಡಗಳ ನಿರ್ಮಾಣದ ಕಥೆಯನ್ನು ಲಭ್ಯವಿರುವ ಆಧಾರಗಳಿಂದ ಕಟ್ಟಿ ನೋಡಲು ಪ್ರಯತ್ನಿಸಿದರೆ, ಈ ಅಂಶ ಸ್ಪಷ್ಟವಾಗುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇತರ ಕಲೆಗಳಂತೆಯೇ ವಾಸ್ತುಶಿಲ್ಪವೂ, ಆಯಾ ಕಾಲದ ಮತ್ತು ಆಯಾ ಜನಾಂಗದ ಆಂತರಿಕ ಆಕಾಂಕ್ಷೆ, ಅನುಭವಗಳಿಗೆ ಕನ್ನಡಿಯನ್ನು ಹಿಡಿಯಬಲ್ಲದೆಂಬುದು, Architeture is the matrix of civilization ಎಂಬ ಹೇಳಿಕೆಯಲ್ಲಿ ಈ ಅಭಿಪ್ರಾಯ ಸೂಚಿತವಾಗಿದೆ.[೮]

ಭಾರತದ ಪ್ರಾಚೀನ ನಾಗರೀಕತೆಯಾದ ಸಿಂಧೂ ಸಂಸ್ಕೃತಿಯಲ್ಲಿ ದೊರೆತ ಮುದ್ರೆಗಳು, ಮೊಹೆಂಜೋದರೋದಲ್ಲಿ ದೊರೆತ ನರ್ತಕಿಯ ಕಂಚಿನ ವಿಗ್ರಹ, ಪುರೋಹಿತನ ಶಿಲ್ಪ, ಪಶುಪತಿ,

ಶಿವ, ಗೂಳಿ ಹಾಗೂ ಇನ್ನಿತರ ವಸ್ತುಗಳು ಅವರ ಕಲೆಯ ಆಸಕ್ತಿಗೆ ಸಾಕ್ಷಿಗಳಾಗಿವೆ. ಪಶುಪತಿಯಂತಹ ವಿಗ್ರಹವನ್ನು ಪೂಜಿಸುತ್ತಿದ್ದುದು ಬೆಳಕಿಗೆ ಬಂದ ಸಂಗತಿಯಾಗಿದೆ. ಈ ಸಂಸ್ಕೃತಿಯಲ್ಲಿ ಗಮನ ಸೆಳೆಯುವ ಒಂದಂಶವೆಂದರೆ ದೇಗುಲಗಳಿಗಿಂತ ಮುಂಚೆಯೇ ಮೂರ್ತಿಶಿಲ್ಪದ ಬೆಳವಣಿಗೆ ಆರಾಧನೆ ಇತ್ತೆಂದು ಹೇಳಬಹುದು.

ಮೂರ್ತಿಗಳ ಪೂಜೆ ಆರಂಭವಾದ ಬಳಿಕ ಅವುಗಳ ರಕ್ಷಣೆಗೆ ವಾಸ್ತು ರೂಪ ನೀಡಲಾಯಿತು. ಕಾಲಾನಂತರದಲ್ಲಿ ಭಾರತೀಯ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ ಕೀರ್ತಿ ಮೌರ್ಯರಿಗೆ ಸಲ್ಲುತ್ತದೆ.[೯] ಈ ದೃಷ್ಟಿಯಿಂದ ಅಶೋಕನ ಕಾಲ ಬಹಳ ಮುಖ್ಯವಾದುದು. ಅಲ್ಲಿಯವರೆಗೆ ಅಂದರೆ ಕ್ರಿ.ಪೂ. ೩ನೇ ಶತಮಾನದವರೆಗೆ ಭರತಖಂಡದ ವಾಸ್ತುಶಿಲ್ಪದ ಚರಿತ್ರೆ ಅಸ್ಪಷ್ಟವೆಂದೇ ಹೇಳಬೇಕು. ಧಾರ್ಮಿಕ ಅಂಶಗಳಿಂದ ಅಶೋಕನ ಕಾಲದಲ್ಲಿ ಬೌದ್ಧ ಧರ್ಮ ರಾಜನ ಧರ್ಮವಾದುದಲ್ಲದೇ ರಾಜ್ಯಧರ್ಮವೂ ಆಯಿತು. ವಾಸ್ತುಶಿಲ್ಪದ ಮೇಲೆ ಬೌದ್ಧಧರ್ಮ ಅಚ್ಚಳಿಯದ ಪ್ರಭಾವವನ್ನು ಬೀರಿತು. ಬುದ್ಧನ ಅವಶೇಷಗಳ ರಕ್ಷಣೆಗಾಗಿ ಅನೇಕ ಸ್ತೂಪಗಳು ನಿರ್ಮಾಣವಾದವು. ಕಲ್ಲುಗಳನ್ನು ಕೊರೆದು ಗುಹೆಗಳನ್ನು ನಿರ್ಮಿಸಿದರು. ಇವು ವಾಸ್ತುಶಿಲ್ಪದ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದವು. ಅದರಲ್ಲಿಯೂ ಮುಖ್ಯವಾಗಿ ರಚನೆಯ ಮಹತ್ವದಿಂದ ಸ್ತೂಪಗಳು, ಕಲ್ಲನ್ನು ಕೊರೆಯುವ ಹೊಸ ತಂತ್ರದ ದೃಷ್ಟಿಯಿಂದ ಗುಹೆಗಳು, ಆ ಕಾಲದ ಕಟ್ಟಡ ನಿರ್ಮಾಣದ ಮೇಲೆ ಕ್ರಾಂತಿಕಾರಕ ಬದಲಾವಣೆಯನ್ನು ಉಂಟುಮಾಡಿದವು.

ಮೌರ್ಯರ ನಂತರ ಉತ್ತರ ಮತ್ತು ಪಶ್ಚಿಮ ಭಾಗಗಳಲ್ಲಿ ಶುಂಗರು ಪ್ರಬಲರಾದರು. ದಕ್ಷಿಣದಲ್ಲಿ ಶಾತವಾಹನರು ಪ್ರಬಲರಾದರು. ಇವರ ಕಾಲದಲ್ಲಿನ ವಾಸ್ತುಶಿಲ್ಪವನ್ನು ಕಲ್ಲುಗಳ ಮೇಲೆ ಕೆತ್ತನೆಗಳು, ಸಾಂಕೇತಿಕ ನಿರೂಪಣೆಗಳು (Symbolism) ಕಲ್ಲುಕಟ್ಟಡಗಳು ಮತ್ತು ಚೈತ್ಯಾಲಯಗಳು, ಬೌದ್ಧ ಸನ್ಯಾಸಿಗಳ ಮಠಗಳು ಅಥವಾ ವಿಹಾರಗಳು ಹೀಗೆ ವಿಭಾಗಿಸಬಹುದು.

ಕ್ರಿ.ಶ.೨೫೦ ರಿಂದ ೪೫೦ರವರೆಗೆ ಬೆಳೆದು ಬಂದ ವಾಸ್ತುಶಿಲ್ಪದ ಯುಗವನ್ನು ಗಾಂಧಾರ ರೀತಿಯ ವಾಸ್ತುಶಿಲ್ಪ ಎಂದು ಕರೆಯಲಾಗಿದೆ. ಇವುಗಳಲ್ಲಿ ಪ್ರಾರಂಭದ ಕಟ್ಟಡಗಳು ಒರಟು ರೂಪದ ಕಲ್ಲು ಗುಂಡುಗಳಿಂದ ನಿರ್ಮಿತವಾಗುತ್ತಿದ್ದವು. ಕುಶಾನರ ಕಾಲದಲ್ಲಿ ಇಂತಹ ಚೈತ್ಯಾಲಯಗಳೂ, ವಿಹಾರಗಳೂ ನಿರ್ಮಿತವಾದವು. ಗಾಂಧಾರ, ವಾಸ್ತುಶಿಲ್ಪದ ಕಾಲದಲ್ಲಿಯೇ ಮೂಡಿಬಂದ ಇನ್ನೊಂದು ಮಾದರಿಯೆಂದರೆ ಮಥುರಾ ರೀತಿ. ಚೈತ್ಯಾಲಯಗಳ ಕಮಾನುಗಳನ್ನೂ ಮತ್ತು ಅದರ ಮುಖ್ಯ ಅಂಶಗಳನ್ನು ಮಥುರಾ ರೀತಿಯು ಅನುಕರಿಸಿತು.[೧೦]

ಒಂದು ದೇವಾಲಯಗಳನ್ನು ಕಲ್ಲಿನಿಂದ ನಿರ್ಮಿಸುವುದರಲ್ಲಿ ಪ್ರಮುಖವಾದ ಹೆಜ್ಜೆಯನ್ನಿಟ್ಟಿತ್ತು ಗುಪ್ತರ ಯುಗ. ಹಿಂದೂ ಧರ್ಮದ ಶ್ರದ್ಧಾವಂತ ಅನುಯಾಯಿಗಳಾದ ಗುಪ್ತರಿಂದ ದೇವಾಲಯಗಳ

ರಚನೆಗೆ ವಿಶೇಷ ಪ್ರೋತ್ಸಾಹ, ಪೋಷಣೆಗಳು ಸಿಕ್ಕವು. ಇವರ ಕಾಲದಲ್ಲಿ ಅಂದರೆ ಸುಮಾರು ೪ನೇ ಶತಮಾನದಿಂದ ೬ನೇ ಶತಮಾನದವರೆಗೆ ದೇವಾಲಯಗಳ ನಿರ್ಮಾಣದ ಕಲೆ ಗಮನಾರ್ಹವಾದ ವಿಕಾಸವನ್ನು ಪಡೆಯಿತು. ಕರ್ನಾಟಕದಲ್ಲಿ ಚಾಲುಕ್ಯರಿಗಿಂತ ಹಿಂದೆ ನಿರ್ಮಿತವಾದ ಎಲ್ಲಾ ದೇವಾಲಯಗಳನ್ನು ಮೊರ್ಯಾಸ್‌ರವರು 'ಕದಂಬಶೈಲಿ' ಎಂದು ಕರೆದಿದ್ದಾರೆ. ಹಲಸಿಯ ಹಟ್ಟಿಕೇಶ್ವರ, ಕಲ್ಲೇಶ್ವರ, ನರಸಿಂಹ, ದೇವಾಲಯಗಳು, ಕದಂಬರ ಕಾಲದ ವಾಸ್ತುಶಿಲ್ಪ ಶೈಲಿಯ ದ್ಯೋತಕಗಳಾಗಿದೆ.

ಕರ್ನಾಟಕದ ವಾಸ್ತುಶಿಲ್ಪ ಕ್ಷೇತ್ರದಲ್ಲಿ ಅನೇಕ ಬಗೆಯ ಪ್ರಯೋಗಗಳನ್ನು ನಡೆಸಿದ ಕೀರ್ತಿ ಬಾದಾಮಿ ಚಾಲುಕ್ಯರ ಮನೆತನಕ್ಕೆ ಸಲ್ಲುತ್ತದೆ. ಇವರ ಕಾಲದಲ್ಲಿ ದ್ರಾವಿಡ, ನಾಗರ, ವೇಸರ ಶೈಲಿಗಳ ದೇಗುಲಗಳನ್ನು ಕಟ್ಟಿಸಿದ್ದಾರೆ. ಇವರ ಕಾಲದಲ್ಲಿ ಪಟ್ಟದಕಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ, ಪಾಪನಾಥ, ಐಹೊಳೆಯಲ್ಲಿ ಲಾಡಾಖಾನ್, ದುರ್ಗಾ ದೇವಾಲಯ, ಮೇಗುತಿ ದೇವಾಲಯ ಮುಂತಾದ ಗುಹಾಲಯಗಳನ್ನು ಕಾಣುತ್ತೇವೆ. ಇವರು ವಾಸ್ತುಶಿಲ್ಪಕ್ಕೆ ನೀಡಿದ ಅಪಾರ ಕೊಡುಗೆಯಿಂದಾಗಿ ಈ ಕಾಲವನ್ನು 'ಸುವರ್ಣಯುಗ'[೧೧] ಎನ್ನುತ್ತಾರೆ.

ರಾಷ್ಟ್ರಕೂಟರ ಆಳ್ವಿಕೆಯ ಅವಧಿಯಲ್ಲಿ ವಾಸ್ತುಶಿಲ್ಪ ಕ್ಷೇತ್ರ ಗಟ್ಟಿಯಾದ ಸ್ವರೂಪವನ್ನು ಪಡೆಯಿತು. ಇದರ ವಾಸ್ತುಶೈಲಿಯನ್ನು ಎಲ್ಲೋರದ ಕೈಲಾಸನಾಥ ದೇವಾಲಯ ಮತ್ತು ಅಲ್ಲಿನ ಗುಹಾಲಯಗಳಲ್ಲಿ ಕಾಣಬಹುದು. ನಂತರದಲ್ಲಿ ಕಲ್ಯಾಣ ಚಾಲುಕ್ಯರು ಕರ್ನಾಟಕದ ವಾಸ್ತುಶಿಲ್ಪ ಕ್ಷೇತ್ರಕ್ಕೆ ನವೀನತೆಯನ್ನು ತುಂಬಿದರು. ಚಾಲುಕ್ಯರು ಬಳಸಿದ ಒರಟಾದ ಕೆಂಪು ಮರಳು ಶಿಲೆಯನ್ನು ಬಿಟ್ಟು ಮೃದು ಮತ್ತು ನಯವಾದ ನೀಲಿ ಛಾಯೆಯ ಬಳಪದ ಕಲ್ಲನ್ನು ಬಳಸಿದ್ದಾರೆ. ಇವರ ಕಾಲದ ದೇವಾಲಯಗಳೆಂದರೆ ಗದುಗಿನ ತ್ರಿಕೂಟೇಶ್ವರ, ಹಾನಗಲ್ಲಿನ ತಾರಕೇಶ್ವರ, ಬಂಕಾಪುರದ ೬೦ ಕಂಬದ ದೇವಾಲಯ[೧೨] ಇತ್ಯಾದಿಗಳು.

ಹೊಯ್ಸಳರ ಕಾಲವು ದೇವಾಲಯಗಳ ವಿಕಾಸದಲ್ಲಿ ಆಕರ್ಷಕವಾದ ಕಾಲಘಟ್ಟ ಎನ್ನಬಹುದು. ಹೊಯ್ಸಳ ವಾಸ್ತುಶಿಲ್ಪದ ಪ್ರಮುಖ ಅಂಶಗಳೆಂದರೆ ಕಟ್ಟಡದ ಒಟ್ಟು ರೂಪ ಮತ್ತು ತಲಾವಿನ್ಯಾಸ, ಗೋಡೆಯ ರಚನೆ ಮತ್ತು ಅದರ ಮೇಲಿನ ಅಲಂಕಾರಗಳು, ಗೋಪುರ ಅಥವಾ ಶಿಖರಗಳ ರಚನೆ, ಕಂಬಗಳ ನಿರ್ಮಾಣದಲ್ಲಿ ಕಂಡುಬರುವ ಕುಶಲತೆ. ಇವರು ಕಪ್ಪು-ನೀಲಿ ಛಾಯೆಯುಳ್ಳ ಬಳಪದ ಕಲ್ಲನ್ನು ಬಳಸಿದ್ದಾರೆ.[೧೩]

ಇಡೀ ದಕ್ಷಿಣ ಭಾರತಕ್ಕೆ ಧಾರ್ಮಿಕ ರಕ್ಷಣೆಯನ್ನು ಕೊಟ್ಟ ಕರ್ನಾಟಕ ಸಾಮ್ರಾಜ್ಯ ವಿಜಯನಗರ. ಎಲ್ಲ ಕಲೆಗಳಂತೆ ವಾಸ್ತುಶಿಲ್ಪ, ಶಿಲ್ಪಿಗಳೂ ಈ ಸಾಮ್ರಾಜ್ಯದಡಿಯಲ್ಲಿ ಪೋಷಣೆಯನ್ನು ಪಡೆದವು. ಗಟ್ಟಿಯಾದ ಗ್ರಾನೈಟ್ ಶಿಲೆಯನ್ನು ಬಳಸಿ ದೇವಾಲಯವನ್ನು ನಿರ್ಮಿಸಿದ್ದಾರೆ.

ಇವರ ಕಾಲದ ದೇವಾಲಯಗಳು ಹಂಪಿ, ಲೇಪಾಕ್ಷಿ, ಕಂಚಿ, ತಿರುಪತಿ, ಮಧುರೈ[೧೪] ಮುಂತಾದ ಕಡೆಗಳಲ್ಲಿ ಕಂಡುಬರುತ್ತದೆ. ಇವರ ಕಾಲದಲ್ಲಿ ದ್ರಾವಿಡ ಶೈಲಿಯು ಉನ್ನತ ಹಂತವನ್ನು ತಲುಪಿತು. ವಿಜಯನಗರ ಪಥನಾನಂತರ ಪಾಳೆಗಾರರು ಅದನ್ನು ಮುಂದುವರೆಸಿಕೊಂಡು ಬಂದರು. ಪ್ರಸ್ತುತ ಕಣಕಟ್ಟೆ ಹೋಬಳಿಯಲ್ಲಿ ಗಂಗರ ಮತ್ತು ಹೊಯ್ಸಳರ ಕಾಲಾವಧಿಗೆ ಸಂಬಂಧಿಸಿದ ದೇವಾಲಯಗಳು ಹೆಚ್ಚಾಗಿ ಕಂಡುಬರುತ್ತದೆ. ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು ಮತ್ತು ಶಾಕ್ತ ದೇವಾಲಯಗಳು ಕಂಡುಬರುತ್ತವೆ. ಇವುಗಳನ್ನು ಅಧ್ಯಯನದ ಹಿನ್ನೆಲೆಯಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

### ೩.೧.೨. ಶೈವ ದೇವಾಲಯ

ದೇವಾಲಯದ ಗರ್ಭಗುಡಿಯಲ್ಲಿ ಹೊಂದಿರುವ ಮೂಲ ದೇವತೆಗಳ ಆಧಾರದ ಮೇಲೆ ವಿವಿಧ ಮತ, ಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳನ್ನು ಗುರುತಿಸಬಹುದು. ಶೈವಾರಾಧನೆ ಭಾರತದ ಪ್ರಾಚೀನ ಆರಾಧನೆಗಳಲ್ಲಿ ಒಂದಾಗಿದ್ದು, ಸಿಂಧೂನಾಗರಿಕತೆಯಲ್ಲಿ ಇದನ್ನು ಕುರಿತ ಕುರುಹುಗಳು ಲಭ್ಯವಾಗಿದೆ. ಕಾಲಾನಂತರದಲ್ಲಿ ಇದು ಭಾರತದಾದ್ಯಂತ ಹರಡಿತು. ಇದಕ್ಕೆ ಕರ್ನಾಟಕವೂ ಹೊರತಾಗಿಲ್ಲ. ಕಣಕಟ್ಟೆ ಹೋಬಳಿ ಪರಿಸರದಲ್ಲಿ ಶೈವ ಧರ್ಮ ಪ್ರಬಲವಾಗಿತ್ತು ಎಂಬುದಕ್ಕೆ ಶೈವ ಸಂಬಂಧಿತ ಸ್ಮಾರಕಗಳೇ ಸಾಕ್ಷಿಗಳಾಗಿದೆ. ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಶೈವ ದೇವಾಲಯಗಳ ವಿವರಣೆಯನ್ನು ಈ ಕೆಳಗಿನಂತೆ ನೀಡಲಾಗಿದೆ.

೧

**ಊರು** : ಕಲ್ಗುಂಡಿ

**ಸ್ಥಳ** : ಕೆರೆಯ ಏರಿಯ ಹಿಂಭಾಗ

**ಸ್ಮಾರಕದ ಹೆಸರು** : ಮಹಾಲಿಂಗೇಶ್ವರ ದೇವಸ್ಥಾನ

**ಅಭಿಮುಖ** : ದಕ್ಷಿಣ

**ಕಾಲ** : ಕ್ರಿ.ಶ.ಸುಮಾರು ೧೧-೧೨ನೇ ಶತಮಾನ

**ಸ್ಥಿತಿ** : ಉತ್ತಮ

ಇದೊಂದು ತ್ರಿಕೂಟ ದೇವಾಲಯವಾಗಿದೆ. ಹೊಯ್ಸಳರ ಕಾಲದಲ್ಲಿ ಈ ದೇವಾಲಯವು ನಿರ್ಮಾಣಗೊಂಡಿದೆ. ಇಲ್ಲಿ ಸಿಕ್ಕಿರುವ ಶಾಸನದ ಪ್ರಕಾರ ಈ ದೇವಾಲಯವು ಹೊಯ್ಸಳರ ದೊರೆ ವಿಷ್ಣುವರ್ಧನನ ಆಡಳಿತದ ಅವಧಿಯಲ್ಲಿ ನಿರ್ಮಾಣವಾಗಿದ್ದು, ಈ ಪ್ರಾಂತ್ಯದ ಅಥವಾ ಈ ಪ್ರದೇಶಕ್ಕೆ ನೀಡಿದ್ದ ಹೆಸರಿನ ಅನ್ವಯ ಆಸಂಧಿ-೫೦೦ರ ಪ್ರದೇಶವನ್ನು ರಾಣಿ ಬೊಮ್ಮಲದೇವಿಯು ನೋಡಿಕೊಳ್ಳುತ್ತಿದ್ದು, ಆಕೆಯು ಈ ದೇವಾಲಯವನ್ನು ನಿರ್ಮಿಸಿದ್ದಾಳೆ. ಇದರ ಕಾಲಾವಧಿ

ಕ್ರಿ.ಶ.೧೧೩೫ ಆಗಿದೆ.[೧೫] ಈ ದೇವಾಲಯವು ದಕ್ಷಿಣಕ್ಕೆ ಮುಖ ಮಾಡಿಕೊಂಡುದ್ದು, ಈ ದೇವಾಲಯವು ಸುಮಾರು ೪೦-೫೦ ಅಡಿಗಳ ಮುಂದೆ ಎತ್ತರವಾದ ಕೆರೆಯ ಏರಿ ಇದೆ. ಹಾಗೆಯೇ ದೇವಾಲಯದ ಹಿಂದೆ ಸ್ವಲ್ಪ ಪ್ರದೇಶ ಬಯಲು ಭೂಮಿ ಇದ್ದು, ಅದರ ಹಿಂದೆ ತೆಂಗಿನ ತೋಟ ಕಂಡುಬರುತ್ತದೆ. ಇದೊಂದು ತ್ರಿಕೂಟ ದೇವಾಲಯವಾಗಿದ್ದು, ಪೂರ್ವ, ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳಿಗೆ ಅಭಿಮುಖವಾಗಿ ಮೂರು ಗರ್ಭಗೃಹಗಳು ಕಂಡುಬರುತ್ತದೆ. ಮತ್ತು ಮೂರು ಗರ್ಭಗೃಹಗಳೊಳಗೂ ಶಿವಲಿಂಗಗಳೇ ಕಂಡುಬರುತ್ತವೆ. ಪೂರ್ವ ದಿಕ್ಕಿಗೆ ಇರುವ ಗರ್ಭಗೃಹದ ಮುಂದೆ ದೊಡ್ಡದಾದ ನಂದಿ ಕಂಡುಬರುತ್ತದೆ. ಇದು ನವರಂಗದ ಮಧ್ಯಭಾಗದಲ್ಲಿ ಕಂಡುಬರುತ್ತದೆ.

ದಕ್ಷಿಣ ದಿಕ್ಕಿನ ಗರ್ಭಗುಡಿಯಲ್ಲೂ ಶಿವಲಿಂಗವಿದ್ದು, ಈ ದೇವಾಲಯದ ಹೊರಗೆ ನಂದಿಯನ್ನು ಇಡಲಾಗಿದೆ. ಈ ದೇವಾಲಯವು ಗರ್ಭಗೃಹ, ನವರಂಗ ಮತ್ತು ಸಭಾ ಮಂಟಪವನ್ನು ಹೊಂದಿದ್ದು, ಕಲ್ಲಿನಿಂದ ನಿರ್ಮಿತಿಯಾಗಿದೆ. ದೇವಾಲಯದ ಒಳಗಿರುವ ನಂದಿಯು ಕಪ್ಪುಶಿಲೆಯಿಂದ ಕೆತ್ತಲಾಗಿದೆ. ದಕ್ಷಿಣ ದಿಕ್ಕಿನಲ್ಲಿರುವ ಗರ್ಭಗುಡಿಯ ಮೇಲೆ ಶಿಖರವಿದೆ. ಸಭಾಮಂಟಪದ ಮೇಲ್ಭಾವಣಿಯ ೪ ದಿಕ್ಕುಗಳಲ್ಲಿಯೂ ೪ ವೃಷಭಗಳನ್ನು ಅಥವಾ ನಂದಿಯನ್ನು ಕೆತ್ತಲಾಗಿದ್ದು, ಸಂಪೂರ್ಣವಾಗಿ ದೇವಾಲಯ ಮತ್ತು ನಂದಿ ಶಿಲ್ಪಗಳಿಗೆ ಸುಣ್ಣವನ್ನು ಹೊಡೆಯಲಾಗಿದೆ. ಗೋಡೆಯ ಮೇಲೆ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ಹಾಗೆಯೇ ನವರಂಗದ ಕಂಬಗಳು ಸುಸ್ಥಿತಿಯಲ್ಲಿದ್ದು, ಅವುಗಳ ಮೇಲೂ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

೨

**ಊರು** : ಕಿತ್ತನಕೆರೆ

**ಸ್ಥಳ** : ಊರಿನ ಉತ್ತರ ಭಾಗ

**ಸ್ಮಾರಕದ ಹೆಸರು** : ಶಿವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.ಸುಮಾರು ೧೧-೧೨ನೇ ಶತಮಾನ

**ಸ್ಥಿತಿ** : ಉತ್ತಮ (ಜೀರ್ಣೋದ್ಧಾರಗೊಂಡಿದೆ)

ಈ ದೇವಾಲಯವು ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡಿದೆ.[೧೬] ಹೊಯ್ಸಳ ದೊರೆ ವಿಷ್ಣುವರ್ಧನನ ಅವಧಿಯಲ್ಲಿ ಮಹಾಸಾಮಂತ ಚೋಳಯ ಆತನ ಮಗ ಬೆನವಯ ನಿರ್ಮಿಸಿದ್ದಾರೆ. ಮತ್ತು ಈ ದೇವಾಲಯಕ್ಕೆ ಭೂಮಿಯನ್ನು ದಾನ ನೀಡಿದ್ದರ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.

ಈಗ ಶಿಥಿಲಾವಸ್ಥೆಯನ್ನು ಹೊಂದಿದ್ದರಿಂದ ಊರಿನ ಗ್ರಾಮಸ್ಥರೆಲ್ಲ ಸೇರಿ ಈ ದೇವಾಲಯವನ್ನು ಜೀರ್ಣೋದ್ಧಾರ ಗೊಳಿಸಿದ್ದಾರೆ. ಹಾಗಾಗಿ ಈ ದೇವಾಲಯವು ಒಳಗಡೆ ಪ್ರಾಚೀನ ರೀತಿಯಲ್ಲಿದ್ದು, ಹೊರಗಡೆ ಗಾರೆ ಸೀಮೆಂಟಿನಿಂದ ಮಾಡಿದ ಗೋಡೆಯನ್ನು ಹೊಂದಿದೆ. ಈ ದೇವಾಲಯವು ಗರ್ಭಗುಡಿ ಮತ್ತು ಮುಖಮಂಟಪವನ್ನು ಮಾತ್ರ ಹೊಂದಿದೆ. ಗರ್ಭಗುಡಿಯ ಮೇಲೆ ಯಾವುದೇ ಶಿಖರವು ಕಂಡುಬರುವುದಿಲ್ಲ. ಗರ್ಭಗುಡಿಯ ಒಳಗೆ ಸುಮಾರು ಒಂದೂವರೆ ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಎದುರಿಗೆ ಅಲಂಕಾರವುಳ್ಳ ನಂದಿಯ ಶಿಲ್ಪವಿದೆ. ಮತ್ತು ಈ ನಂದಿಯ ಪಕ್ಕದಲ್ಲಿಯೇ ಕಪ್ಪು ಶಿಲೆಯಿಂದ ಮಾಡಿದ ಪಾದಗಳನ್ನು ಇಡಲಾಗಿದೆ. ಈ ದೇವಾಲಯದ ಒಳಗಡೆ ಯಾವುದೇ ಕಂಬಗಳು, ಅಲಂಕಾರಗಳು, ಬೇರೆ ಶಿಲ್ಪಗಳು ಕಂಡುಬರುವುದಿಲ್ಲ. ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಇದು ನಿರ್ಮಾಣವಾಗಿದ್ದು ಇಲ್ಲಿನ ಮಹಾಸಾಮಂತ ಬೆನವಯ್ಯನ ಮಗ ಚೋಳಯ್ಯನು ಈ ದೇವಾಲಯದ ಕೆಲಸ ಕಾರ್ಯಗಳಿಗಾಗಿ ಭೂಮಿಯನ್ನು ನೀಡಿದ್ದನು[೧೭] ಎಂದು ಶಾಸನದಲ್ಲಿ ಉಲ್ಲೇಖಿತವಾಗಿದೆ.

೩.

**ಊರು** : ಸಾತಂಗೆರೆ

**ಸ್ಥಳ** : ಊರಿನ ಮಧ್ಯಭಾಗ

**ಸ್ಮಾರಕದ ಹೆಸರು** : ಸೋಮೇಶ್ವರ ದೇವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.೧೧-೧೨ನೇ ಶತಮಾನ

**ಸ್ಥಿತಿ** : ಉತ್ತಮ

ಸಾತಂಗೆರೆಯಲ್ಲಿ ಕಂಡುಬರುವ ಪ್ರಮುಖ ಶೈವದೇವಾಲಯ ಇದಾಗಿದೆ. ಇದು ಹೊಯ್ಸಳರ ಕಾಲಾವಧಿಯಲ್ಲಿ ನಿರ್ಮಾಣವಾದ ದೇವಾಲಯವಾಗಿದೆ. ಹೊಯ್ಸಳ ರಾಜ ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಈ ದೇವಾಲಯ ನಿರ್ಮಾಣವಾಗಿದೆ.[೧೮] ಈಗ ಈ ದೇವಾಲಯವು ಜೀರ್ಣೋದ್ಧಾರವಾಗಿದೆ. ಈ ದೇವಾಲಯವನ್ನು ಶಿಲೆಯಿಂದ ನಿರ್ಮಿಸಲಾಗಿದ್ದು ದೇವಾಲಯವು ಗರ್ಭಗೃಹ ಮತ್ತು ನವರಂಗ ಮತ್ತು ಹೊರಗಡೆ ಜಗತಿಯನ್ನು ಹೊಂದಿದ್ದು, ದೇವಾಲಯವು ಭೂಮಿಯಿಂದ ಸುಮಾರು ೪-೫ ಅಡಿ ಎತ್ತರದಲ್ಲಿ ನಿರ್ಮಾಣವಾಗಿದ್ದು, ಒಳಗೆ ಹೋಗಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಮತ್ತು ದೇವಾಲಯದ ಗರ್ಭಗುಡಿಯ ಮೇಲ್ಭಾಗದಲ್ಲಿ ಯಾವುದೇ ಶಿಖರವು ಕಂಡುಬರುವುದಿಲ್ಲ. ಗರ್ಭಗೃಹದಲ್ಲಿ ಸುಮಾರು ಒಂದು ಅಡಿ ಎತ್ತರದ ಶಿವಲಿಂಗವಿದ್ದು ಲಿಂಗದ ಜಲಹರಿಯು ಎಡಕ್ಕಿದೆ. ಮತ್ತು ಈ ಶಿವಲಿಂಗದ ಮೇಲೆ ೨೪

ಗಂಟೆಯೂ ನೀರಿನ ಹನಿ ಮೇಲಿನಿಂದ ಬೀಳುವಂತೆ ತಾಮ್ರದ ಚೊಂಬನ್ನು ಮೇಲೆ ಕಟ್ಟಲಾಗಿದೆ. ಈ ಚೊಂಬಿನ ಪಕ್ಕದಲ್ಲಿ ರುದ್ರಾಕ್ಷಿಗಳ ಮಾಲೆಯನ್ನು ಇಡಲಾಗಿದೆ. ಶಿವಲಿಂಗದ ಪಕ್ಕದಲ್ಲಿ ಸರಿಸುಮಾರು ೨ ಅಡಿ ಎತ್ತರವಿರುವ ತ್ರಿಶೂಲವನ್ನು ಇಡಲಾಗಿದೆ. ಗರ್ಭಗೃಹದ ಮುಂದಿನ ನವರಂಗದ ಮಧ್ಯದ ಭಾಗದಲ್ಲಿ ಶಿವನ ವಾಹನವಾದ ಬಸವನನ್ನು ಪ್ರತಿಷ್ಠಾಪಿಸಲಾಗಿದೆ. ಇದನ್ನು ನೆಲದ ಮಟ್ಟದಿಂದ ಅರ್ಧ ಅಡಿ ಎತ್ತರಕ್ಕೆ ಇಡಲಾಗಿದೆ. ನಂದಿಯು ಬಹಳ ಸುಂದರವಾಗಿದ್ದು, ಕಪ್ಪುಶಿಲೆಯಿಂದ ಕೂಡಿದ್ದುದಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಚಿತ್ರಣವಿದೆ. ದೇವಾಲಯದ ಒಳಗಡೆ ಗೋಡೆಯ ಮೇಲೆ ಮತ್ತು ಕಂಬದ ಮೇಲೆ ಯಾವುದೇ ಶಿಲ್ಪಗಳ ಕೆತ್ತನೆ ಕಂಡುಬರುವುದಿಲ್ಲ. ದೇವಾಲಯದ ಮೇಲಿನ ೪ ಕಡೆಯು ನಂದಿಯ ಶಿಲ್ಪಗಳಿದ್ದು, ದೇವಾಲಯ ಮುಂದೆ ಅಥವಾ ದೇವಾಲಯವನ್ನು ಪ್ರವೇಶಿಸುವ ಬಾಗಿಲಿನ ಮೇಲಿನ ಕಟ್ಟಡದಲ್ಲಿ ನಂದಿಯ ಮೇಲೆ ಕುಳಿತಿರುವ ಈಶ್ವರನ ವಿಗ್ರಹ ಮತ್ತು ಪಕ್ಕದಲ್ಲಿ ಪಾರ್ವತಿಯ ವಿಗ್ರಹವನ್ನು ಕೆತ್ತಲಾಗಿದೆ. ಈ ಶಿಲ್ಪದ ಬಲಭಾಗದ ಪಕ್ಕದಲ್ಲಿ ಗಣಪತಿಯ ಶಿಲ್ಪವಿದೆ.

ಇದಲ್ಲದೆ ದೇವಾಲಯದ ಮುಂಭಾಗದಲ್ಲಿ ಸುಮಾರು ೨೫ ಅಡಿ ದೂರದಲ್ಲಿ ಚಿಕ್ಕದಾದ ಕಲ್ಲುಮಂಟಪವಿದ್ದು, ಅದರೊಳಗೆ ಒಂದು ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಇದು ದೇವಾಲಯದ ಒಳಗಡೆ ಇರುವ ನಂದಿವಿಗ್ರಹಕ್ಕಿಂತ ದೊಡ್ಡದಾಗಿದ್ದು, ಇದರ ಪಕ್ಕದಲ್ಲಿ ಗಣಪತಿಯ ವಿಗ್ರಹವನ್ನು ಇಡಲಾಗಿದೆ.

**೪**

**ಊರು** : ಕಣಕಟ್ಟೆ

**ಸ್ಥಳ** : ಕೆರೆಯ ಮುಂಭಾಗ

**ಸ್ಮಾರಕದ ಹೆಸರು** : ಸಿಂಗನಾಥೇಶ್ವರ ದೇವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.ಸುಮಾರು ೧೧-೧೨ನೇ ಶತಮಾನ

**ಸ್ಥಿತಿ** : ಕನಿಷ್ಠ

ಹೊಯ್ಸಳರ ಕಾಲಾವಧಿಯಲ್ಲಿ ಈ ದೇವಾಲಯವು ನಿರ್ಮಾಣವಾಗಿದೆ. ಇದನ್ನು ವಿಷ್ಣುವರ್ಧನನ ಆಳ್ವಿಕೆಯಲ್ಲಿ ಕಣಕಟ್ಟೆಯಲ್ಲಿ ಆಡಳಿತ ನಡೆಸುತ್ತಿದ್ದ ಅರಸೀಕೆರೆಯ ಸಾಮಂತ ಸಿಂಗರಸನು ೨೫ ಡಿಸೆಂಬರ್ ೧೧೨೯ರಲ್ಲಿ ಪ್ರತಿಷ್ಠಾಪಿಸಿದನು. ಇದರ ನಿರ್ಮಾತೃ ಸಿಂಗರಸನ ಹೆಸರಿನಲ್ಲಿ ದೇವಾಲಯಕ್ಕೆ ಸಿಂಗೇಶ್ವರ, ಸಿಂಗನಾಥೇಶ್ವರ ಎಂಬ ಹೆಸರು ಬಂದಿದೆ.[೧೯] ದೊಡ್ಡ ಕೆರೆಯ ದಿಬ್ಬದ ಮೇಲೆ ನಿರ್ಮಾಣಗೊಂಡಿರುವ ಈ ದೇವಾಲಯವು ೩ ಗರ್ಭಗೃಹ ಹೊಂದಿದೆ.

ಆದರೆ ಈಗ ಮಧ್ಯದ ಪ್ರಮುಖ ಗರ್ಭಗೃಹದಲ್ಲಿ ಮಾತ್ರ ಶಿವಲಿಂಗವಿದ್ದು, ಉಳಿದ ಎರಡು ಗರ್ಭಗೃಹಗಳು ಶಿಥಿಲವಾಗಿದ್ದು, ಇದು ೩ ಗರ್ಭಗೃಹವನ್ನು ಹೊಂದಿತು ಎನ್ನುವುದನ್ನು ಇಲ್ಲಿನ ಶಾಸನಗಳಿಂದ[೨೦] ಮಾತ್ರ ತಿಳಿಯಬಹುದಾಗಿದೆ. ಮುಖ್ಯ ಗರ್ಭಗೃಹದ ಮೇಲಿನ ಛಾವಣಿಯು ಬಿದ್ದು ಹೋಗಿದ್ದು, ಕಲ್ಲಿನಿಂದ ಕಟ್ಟಿರುವ ಗೋಡೆಯು ಅಲ್ಲಲ್ಲಿ ಶಿಥಿಲತೆಯನ್ನು ಹೊಂದಿದೆ. ಗರ್ಭಗೃಹದಲ್ಲಿನ ಶಿವಲಿಂಗವು ಸುಮಾರು ಮುಕ್ಕಾಲು ಅಡಿ ಎತ್ತರದಲ್ಲಿದ್ದು, ಕೆಳಗಿನ ಜಲಹರಿಯು ಎಡಭಾಗಕ್ಕಿದೆ. ಗರ್ಭಗೃಹದ ಮುಂದೆ ಅಂತರಾಳವಿದೆ. ಅದರ ಮುಂದೆ ನವರಂಗವಿದೆ. ನವರಂಗದ ಮಧ್ಯಭಾಗದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಬಾಗಿಲುವಾಡದಲ್ಲಿ ಎರಡು ಶಾಖೆಗಳಿದ್ದು, ಅವುಗಳನ್ನು ಜಾಲಂಧ್ರಗಳಿಂದ ಅಥವಾ ಜಾಲಂದ್ರಗಳ ರೀತಿಯಲ್ಲಿ ಸಣ್ಣ ಸಣ್ಣ ಚೌಕುಗಳಿಂದ ಅಲಂಕರಿಸಲಾಗಿದೆ. ನಂದಿಯನ್ನು ಸಮತಟ್ಟಾದ ನೆಲದ ಭಾಗಕ್ಕಿಂತ ಸ್ವಲ್ಪ ಎತ್ತರವಾದ ವೇದಿಕೆಯ ಮೇಲೆ ಇಡಲಾಗಿದ್ದು, ನಂದಿಯ ಕೊರಳಿಗೆ ಪದಕದ ರೀತಿಯ ಸರವನ್ನು ಕಲ್ಲಿನಲ್ಲೇ ಕೆತ್ತಿದ್ದಾರೆ. ಮತ್ತು ಕೊರಳಲ್ಲಿ ಮಾಲೆಯ ರೀತಿಯಲ್ಲಿ ಕಲ್ಲಿನಿಂದಲೇ ಕೆತ್ತಿದ್ದಾರೆ. ಇಲ್ಲಿನ ೪ ಕಂಬಗಳ ತಲಭಾಗ ಚೌಕಾಕಾರವಾಗಿದ್ದು ಅದರ ಮೇಲ್ಭಾಗದಲ್ಲಿ ಫಲಕ, ಬೋದಿಗೆಗಳನ್ನು ಒಳಗೊಂಡಿದೆ. ನವರಂಗದ ಮಧ್ಯಭಾಗದಲ್ಲಿ ಮೇಲ್ಛಾವಣಿಯಲ್ಲಿ ಭುವನೇಶ್ವರಿ ಇದೆ. ಇತರ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ನವರಂಗದ ಮುಂದೆ ಸಭಾಮಂಟಪವಿದೆ. ಈ ಸಿಂಗನಾಥೇಶ್ವರ ಗುಡಿಯ ಹಿಂಬದಿಯಲ್ಲಿ ವಿಶಾಲವಾದ ಹಲವಾರು ಅಂಕಣದ ಕಲ್ಲಿನ ಸ್ತಂಭದ ಮೇಲೆ ಹಾಕಲ್ಪಟ್ಟಿದೆ. ೧೪೫೫ರಲ್ಲಿ ದೇವಣ ಹೆಬ್ಬಾರರ ಮಗ ನಾರಸಿಂಹ ಮತ್ತು ತಿಮ್ಮನ ಮಗ ದೇವ ಎಂಬುವವರು ಈ ಮಂಟಪವನ್ನು ನಿರ್ಮಿಸಿದರು. ಅಂದು ಊರಿನವರು ಸಂಧ್ಯಾವಂದನಾದಿಗಳ ಕಾರ್ಯಕ್ಕೆ ಇದನ್ನು ಬಳಸುತ್ತಿದ್ದರಿಂದ ಇದನ್ನು ಸಂಧ್ಯಾಮಂಟಪ[೨೧] ಎಂದು ಕರೆಯುತ್ತಿದ್ದರು.

೫

**ಊರು** : ಕಣಕಟ್ಟೆ

**ಸ್ಥಳ** : ದೊಡ್ಡ ಕೆರೆಯ ಮುಂಭಾಗ

**ಸ್ಮಾರಕದ ಹೆಸರು** : ಸಂತೆ ಗಣಪತಿ ಅಥವಾ ಶ್ರೀರಂಗನಾಥ ದೇವಾಲಯ

**ಅಭಿಮುಖ** : ದಕ್ಷಿಣ

**ಕಾಲ** : ಕ್ರಿ.ಶ.೧೨ನೇ ಶತಮಾನ

**ಸ್ಥಿತಿ** : ಮಧ್ಯಮ

ಕಣಕಟ್ಟೆಯಿಂದ ದಿಬ್ಬೂರಿಗೆ ಹೋಗುವ ರಸ್ತೆಯ ಆರಂಭದಲ್ಲಿ ಕೆರೆಯ ಬದಿಯಲ್ಲಿ ಗಣಪತಿ ಗುಡಿಯಿದೆ. ಇದರ ಬಳಿ ಸಂತೆ ನಡೆಯುವುದರಿಂದ ಇದನ್ನು ಸಂತೆ ಗಣಪತಿ ಎಂದು ಕರೆಯುವುದುಂಟು.[೨೨] ದೇವಾಲಯದ ನವರಂಗದಲ್ಲಿ ಗಣಪತಿಯ ವಿಗ್ರಹವಿದ್ದು ಈ ದೇವಾಲಯವು ೩ ಗರ್ಭಗೃಹವನ್ನು ಹೊಂದಿದೆ. ಪ್ರಧಾನ ಗರ್ಭಗೃಹದಲ್ಲಿ ಈಶ್ವರ ಲಿಂಗವಿದೆ. ಶಾಸನಗಳು ಇದನ್ನು ಜಗತೀಶ್ವರ ಎಂದು ಕರೆದಿವೆ. ಹೊಯ್ಸಳರ ೨ನೇ ನರಸಿಂಹನ ಆಳ್ವಿಕೆಯಲ್ಲಿ ಅವನ ದಂಡನಾಯಕ ಮಾವಂತಯ್ಯನು ೨೪-೫-೧೨೨೭ರಂದು ಜಗತೀ ಪಂಗಡದವರ ಸಹಕಾರದಿಂದ ಈ ಜಗತೀಶ್ವರ ದೇವಾಲಯಕ್ಕೆ ಭಂಡಾರವೊಂದನ್ನು ಸ್ಥಾಪಿಸಿದನು. ಬಲಶಾಲಿಗಳಾದ ಜಗತಿಗಳು ಇತರರು ನೋಡು ನೋಡುತ್ತಿರುವಂತೆಯೇ ಈ ಜಗತೀಶ್ವರ ದೇವಾಲಯವು ಜಗತ್ತಿಗೆ ಕಲಶಪ್ರಾಯವಾಗುವಂತೆ ನಿರ್ಮಿಸಿದರು ಎಂದು ಶಾಸನವು ವರ್ಣಿಸಿದೆ.[೨೩] ದೇವಾಲಯದ ಇನ್ನೊಂದು ಗರ್ಭಗೃಹದಲ್ಲಿ ಕೇಶವನ ವಿಗ್ರಹವಿದೆ. ದೇವಾಲಯವು ಗರ್ಭಗೃಹ, ನವರಂಗವನ್ನು ಹೊಂದಿದ್ದು, ಒಂದೇ ದ್ವಾರವನ್ನು ಹೊಂದಿದೆ. ದೇವಾಲಯವನ್ನು ಸುಮಾರು ೪-೫ ಅಡಿ ಭೂಮಿಯಿಂದ ಎತ್ತರವಾಗಿ ಕಟ್ಟಲಾಗಿದೆ. ಮತ್ತು ಸುತ್ತಲೂ ಪ್ರಾಕಾರವನ್ನು ಹೊಂದಿದ್ದು, ಹೊಯ್ಸಳರ ಕಾಲಕ್ಕೆ ಸೇರಿದುದ್ದಾಗಿದೆ.

**೬**

**ಊರು** : ಕಣಕಟ್ಟೆ

**ಸ್ಥಳ** : ಕೆರೆಯ ಮುಂಭಾಗ

**ಸ್ಮಾರಕದ ಹೆಸರು** : ಕಮಟೇಶ್ವರ ದೇವಾಲಯ ಅಥವಾ ಸಂಕೋಲೆ ಬಸವಣ್ಣ ದೇವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.ಸುಮಾರು ೧೩-೧೪ನೇ ಶತಮಾನ

**ಸ್ಥಿತಿ** : ಕನಿಷ್ಠ

ಜಗತೀಶ್ವರ ಅಥವಾ ರಂಗನಾಥಸ್ವಾಮಿ ದೇವಾಲಯ ಮತ್ತು ಸಿಂಗನಾಥೇಶ್ವರ ದೇವಾಲಯಗಳ ನಡುವೆ ಕೆರೆಯ ದಡದಲ್ಲಿ ಶಿಥಿಲಾವಸ್ಥೆಯಲ್ಲಿ ಈ ಕಮಟೇಶ್ವರ ಗುಡಿಯಿದೆ. ಈ ದೇವಾಲಯವು ಹೊಯ್ಸಳ ದೊರೆ ನರಸಿಂಹನ ಕಾಲಾವಧಿಯಲ್ಲಿ ನಿರ್ಮಾಣವಾಗಿದ್ದು, ಅವನ ಸಾಮಂತರಾದ ಬಮ್ಮೋಜ ಮತ್ತು ಮಾಚೋಜ ಎಂಬುವವರು ನಿರ್ಮಿಸಿದ್ದರು.[೨೪] ಈ ದೇವಾಲಯವು ಗರ್ಭಗೃಹ, ನವರಂಗ ಮತ್ತು ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಲಾಗಿದ್ದು, ಇದು ಸುಮಾರು ಒಂದೂವರೆ ಅಡಿ ಎತ್ತರವಿದೆ. ಮತ್ತು ನವರಂಗದಲ್ಲಿ ೪ ಕಂಬಗಳಿದ್ದು ಈ ದೇವಾಲಯವು ಒಂದೇ ಗರ್ಭಗೃಹ ಮತ್ತು ಮೂರು ದಿಕ್ಕಿಗೂ ಪ್ರವೇಶ

ದ್ವಾರವನ್ನುಳ್ಳ ನವರಂಗವನ್ನು ಹೊಂದಿದೆ. ನವರಂಗದ ಸ್ತಂಭಗಳ ನಡುವಿನ ಅಂಕಣದಲ್ಲಿ ನಂದಿ ಇದ್ದು ಕೊರಳಿನಲ್ಲಿ ಗಂಟೆ, ಸರಪಳಿ ಇರುವ ಕಾರಣ 'ಸಂಕೋಲೆ ಬಸವ' ಎಂದೂ ಈ ದೇವಾಲಯಕ್ಕೆ ಸಂಕೋಲೆ ಬಸವಣ್ಣನ ಗುಡಿ ಎಂದೂ ಕರೆಯುವುದುಂಟು. ಸಭಾಮಂಟಪದ ಭಾಗವೆಲ್ಲಾ ಶಿಥಿಲವಾಗಿದ್ದು, ಈ ದೇವಾಲಯವು ಶಿಥಿಲಾವಸ್ಥೆಯಲ್ಲಿದೆ. ಹಾಗಾಗಿ ದೇವಾಲಯದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ದೇವಾಲಯದ ಎದುರಿಗೆ ಪುಷ್ಕರಣಿ ಇದ್ದು, ಇದಕ್ಕೆ ಇಲ್ಲಿನ ಜನರು ಮಜ್ಜನ ಭಾವಿ ಎಂದು ಕರೆಯುತ್ತಾರೆ.

೭

**ಊರು** : ಕಣಕಟ್ಟೆ

**ಸ್ಥಳ** : ಊರಿನ ಮಧ್ಯಭಾಗ

**ಸ್ಮಾರಕದ ಹೆಸರು** : ಕಲ್ಲೇಶ್ವರ ದೇವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.ಸುಮಾರು ೧೧-೧೨ನೇ ಶತಮಾನ

**ಸ್ಥಿತಿ** : ಕನಿಷ್ಠ

ಈ ದೇವಾಲಯವು ಕಣಕಟ್ಟೆ ಊರಿನ ಮಧ್ಯಭಾಗದಲ್ಲಿ ಕಂಡುಬರುತ್ತದೆ. ಇದು ಹೊಯ್ಸಳರ ಕಾಲಾವಧಿಯಲ್ಲಿ ನಿರ್ಮಾಣವಾದ ದೇವಾಲಯವಾಗಿದ್ದು ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯಲ್ಲಿ ಕಣಕಟ್ಟೆಯಲ್ಲಿ ಆಡಳಿತ ನಡೆಸುತ್ತಿದ್ದ ಸಾಮಂತ ಸಿಂಗರಸನು ಕ್ರಿ.ಶ.೧೧೩೨ರಲ್ಲಿ ಈ ದೇವಾಲಯವನ್ನು ಕಟ್ಟಿಸಿದನು. ಶಾಸನವು ಇದನ್ನು ಬೆಟ್ಟದ ಕಲಿದೇವರು ಎಂದು ದಾಖಲಿಸಿದೆ. ಬೆಟ್ಟದ ಜೀಯರ ಮೊಮ್ಮಗ ಸಿಕರಜೀಯನಿಗೆ ಈ ದೇವಾಲಯವನ್ನು ದಾನದೊಂದಿಗೆ ಆರ್ಪಿಸಲಾಗಿದೆ.[೨೫] ದೇವಾಲಯವು ಸಾಕಷ್ಟು ಶಿಥಿಲವಾಗಿದೆಯಾದರೂ ಮೂಲಸ್ವರೂಪವನ್ನು ಉಳಿಸಿಕೊಂಡಿದೆ. ಇದು ದ್ವಿಕೂಟ ದೇವಾಲಯವಾಗಿದ್ದು, ಎರಡು ಗರ್ಭಗೃಹಗಳನ್ನು ಹೊಂದಿದೆ. ಒಂದು ಗರ್ಭಗೃಹದಲ್ಲಿ ಶಿವಲಿಂಗವಿದೆ. ಇದು ಸುಮಾರು ಒಂದೂವರೆ ಅಡಿಯಷ್ಟು ಎತ್ತರವಾಗಿದ್ದು, ಗರ್ಭಗುಡಿಯ ಬಾಗಿಲುವಾಡವು ಸರಳವಾದ ರಚನೆಯಿಂದ ಕೂಡಿದೆ. ಶಿವಲಿಂಗದ ಎದುರಿಗೆ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗಿಡಯ ಮೇಲ್ಭಾಗವು ಶಿಖರವನ್ನು ಹೊಂದಿದೆ. ನವರಂಗವು ೪ ಕಂಬಗಳಿಂದ ಕೂಡಿದೆ. ಕಂಬಗಳು ಯಾವುದೇ ಅಲಂಕಾರವನ್ನು ಹೊಂದಿಲ್ಲ. ಇಲ್ಲಿನ ಇನ್ನೊಂದು ಗರ್ಭಗೃವು ಶಿಥಿಲವಾಗಿದ್ದು, ಅಲ್ಲಿ ಯಾವುದೇ ಮೂರ್ತಿಯು ಕಂಡು ಬರುವುದಿಲ್ಲ. ಇದು ದ್ವಿಕೂಟ ದೇವಾಲಯವೆನ್ನುವುದನ್ನು ಶಾಸನದಿಂದ ಮಾತ್ರ ಅರಿಯಲು ಸಾಧ್ಯವಾಗಿದೆ.

೮

ಊರು : ಕಣಕಟ್ಟೆ

ಸ್ಥಳ : ಊರಿನ ಪೂರ್ವ ಭಾಗದಲ್ಲಿ

ಸ್ಮಾರಕದ ಹೆಸರು: ಶ್ರೀ ವೀರಭದ್ರಸ್ವಾಮಿ ದೇವಾಲಯ

ಅಭಿಮುಖ : ಉತ್ತರ

ಕಾಲ : ಕ್ರಿ.ಶ.ಸುಮಾರು ೧೧-೧೨ನೇ ಶತಮಾನ

ಸ್ಥಿತಿ : ಉತ್ತಮ(ಜೀರ್ಣೋದ್ಧಾರವಾಗಿದೆ)

ಈ ದೇವಾಲಯವು ಕಣಕಟ್ಟೆಯಿಂದ ದಿಬ್ಬೂರು ಮಾರ್ಗವಾಗಿ ಹೋಗುವ ದಾರಿಯಲ್ಲಿ ಸಿಗುತ್ತದೆ. ಇದು ಹೊಯ್ಸಳರ ಕಾಲಾವದಿಯಲ್ಲಿ ನಿರ್ಮಾಣವಾದ[೨೬] ದೇವಾಲಯವಾಗಿದೆ. ಇದು ಈಗ ಆಧುನಿಕ ಶೈಲಿಯಲ್ಲಿ ರೂಪಿಸಲ್ಪಟ್ಟಿದೆ. ಈ ದೇವಾಲಯವು ಗರ್ಭಗೃಹ, ನವರಂಗ ಮತ್ತು ಪ್ರಾಕಾರವನ್ನು ಹೊಂದಿದೆ. ಗರ್ಭಗೃಹದಲ್ಲಿ ನಿಂತಿರುವ ಭಂಗಿಯ ವೀರಭದ್ರ ವಿಗ್ರಹವಿದೆ. ದೇವಾಲಯಕ್ಕೆ ಪ್ರಾಕಾರವಿದ್ದು, ಅದರ ಹೊರಬದಿಯಲ್ಲಿ ಬೃಹತ್ ಗಾತ್ರದ ಉಯ್ಯಾಲೆ ಸ್ತಂಭಗಳಿವೆ. ನವರಂಗದಲ್ಲಿ ಸಾಧಾರಣವಾದ ೪ ಕಂಬಗಳಿವೆ. ಮುಂದೆ ಯಾವುದೇ ಮುಖಮಂಟಪ ಅಥವಾ ಸಭಾಮಂಟಪ ಕಂಡುಬರುವುದಿಲ್ಲ.

ದೇವಾಲಯದ ಸುತ್ತಲು ೫-೬ ಅಡಿ ಎತ್ತರದವಾದ ಪ್ರಾಕಾರವಿದ್ದು, ಪ್ರವೇಶದ್ವಾರದ ಹತ್ತಿರ ಜಗತಿಯ ಹಾಗೆ ದ್ವಾರದ ಎರಡು ಬದಿಗಳಲ್ಲಿ ಮಾಡಲಾಗಿದೆ.

೯

ಊರು : ಹೊಳಲ್ಕೆರೆ

ಸ್ಥಳ : ಊರಿನ ಈಶಾನ್ಯ ಭಾಗದಲ್ಲಿ ಹಳ್ಳದ ಮೇಲ್ಭಾಗದಲ್ಲಿ

ಸ್ಮಾರಕದ ಹೆಸರು : ಶ್ರೀರಾಮೇಶ್ವರ ದೇವಾಲಯ

ಅಭಿಮುಖ : ಪೂರ್ವ

ಕಾಲ : ಕ್ರಿ.ಶ.ಸುಮಾರು ೧೧-೧೨ನೇ ಶತಮಾನ

ಸ್ಥಿತಿ : ಉತ್ತಮ (ಜೀರ್ಣೋದ್ಧಾರಗೊಂಡಿದೆ)

ಜಯಚಾಮರಾಜಪುರದಿಂದ ದೊಡ್ಡ ಮೇಟಿಕುರ್ಕೆ ಮಾರ್ಗವಾಗಿ ಹೋಗುವಾಗ ಮಧ್ಯದಲ್ಲಿ ಈ ಹೊಳಲ್ಕೆರೆ ಊರು ಇದ್ದು, ಇಲ್ಲಿ ಈ ದೇವಾಲಯವು ಕಂಡುಬರುತ್ತದೆ. ಇದು ಹೊಯ್ಸಳರ ಅವಧಿಯಲ್ಲಿ ನಿರ್ಮಿತಿಯಾದ[೨೭] ದೇವಾಲಯವಾಗಿದೆ.

ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಮತ್ತು ಮುಖ ಮಂಟಪವನ್ನು ಹೊಂದಿದ್ದು, ಸುಮಾರು ೨೦೦೦ ರಿಂದ ೨೦೧೨ವರೆಗೆ ಜೀರ್ಣೋದ್ಧಾರವಾಗಿದ್ದು, ಬಿಳಿಯ

ಶಿಲೆಗಳಿಂದ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದ್ದು, ಇಲ್ಲಿನ ಶಿವಲಿಂಗವು ಉದ್ಭವಮೂರ್ತಿ, ಯಾರೂ ಪ್ರತಿಷ್ಠಾಪಿಸಿದ್ದಲ್ಲ ಎನ್ನುವ ಪ್ರತೀತಿ ಇದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು ಅದಕ್ಕೆ ಹಿತ್ತಾಳೆಯ ಮುಖವಾಡವನ್ನು ಹಾಕಿದ್ದಾರೆ. ಮೇಲೆ ಐದು ಹೆಡೆಯ ಹಾವಿನ ಅಲಂಕರಣೆ ಇದ್ದು ಹೆಡೆಗಳು ಹರಡಿಕೊಂಡಿವೆ. ನಂದಿಯನ್ನು ನವರಂಗದಲ್ಲಿ ಮುಂಭಾಗದಲ್ಲಿ ಇಡಲಾಗಿದೆ. ನಂದಿಯನ್ನು ಕಪ್ಪುಶಿಲೆಯಿಂದ ಕೆತ್ತಲಾಗಿದೆ. ಹಣೆಪಟ್ಟಿ ಕೊರಳಲ್ಲಿ ಘಂಟೆಯ ಹಾರ ಮತ್ತು ಬೆನ್ನಿನ ಮೇಲೆಲ್ಲ ಚಿತ್ತಾರವಾದ ಗೆರೆಗಳಿಂದ ಅಲಂಕಾರವಾಗಿದೆ. ನವರಂಗದ ನಾಲ್ಕು ಕಂಬಗಳಿಗಿಂತ ಮೊದಲೇ ಈ ನಂದಿಯು ಕಂಡುಬರುತ್ತದೆ. ನವರಂಗವು ಹೆಚ್ಚು ವಿಶಾಲವಾದ ಸ್ಥಳವನ್ನು ಹೊಂದಿದ್ದು, ನವರಂಗವು ೪ ಕಂಬಗಳನ್ನು ಹೊಂದಿದೆ. ಇವು ಆಧುನಿಕ ಶೈಲಿಯವಾಗಿದೆ. ನವರಂಗದ ಮಧ್ಯದಲ್ಲಿ ಭುವನೇಶ್ವರಿ ಇದ್ದು, ಇದೂ ಸಹ ಆಧುನಿಕ ಶೈಲಿಯಲ್ಲಿ ನಿರ್ಮಿತಿಯಾಗಿದೆ. ಗರ್ಭಗೃಹದ ಪಕ್ಕದ ಎಡಕೋಣೆಯಲ್ಲಿ ಕಪ್ಪುಶಿಲೆಯ ಪ್ರಭಾವಳಿಯನ್ನು ಹೊಂದಿರುವ ಗಣೇಶನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಹಾಗೆಯೇ ಬಲಪಕ್ಕದ ಕೋಣೆಯಲ್ಲಿ ಚಿಕ್ಕದಾಗಿ ಅಂದರೆ ಸುಮಾರು ಒಂದೂವರೆ ಅಡಿಯಷ್ಟು ಎತ್ತರದ ಲಕ್ಷ್ಮಿಯ ಶಿಲ್ಪವಿದೆ. ಇದರ ಪಕ್ಕದಲ್ಲಿಯೇ ಅಷ್ಟ ಕೈಗಳನ್ನು ಹೊಂದಿರುವ ಮಹಿಷಾಸುರ ಮರ್ಧಿನಿ ದೇವಿಯ ಶಿಲ್ಪವಿದೆ. ನವರಂಗಕ್ಕೆ ಪ್ರವೇಶಿಸಲು ೩ ದ್ವಾರಗಳನ್ನು ಮಾಡಲಾಗಿದೆ. ಮುಖ್ಯದ್ವಾರವಲ್ಲದೆ, ದಕ್ಷಿಣ ಮತ್ತು ಉತ್ತರ ಭಾಗದಲ್ಲಿಯೂ ದ್ವಾರವನ್ನು ನಿರ್ಮಿಸಲಾಗಿದೆ. ಅಂತರಾಳ ಪ್ರವೇಶಿಸುವ ದ್ವಾರದಲ್ಲಿ ಎರಡೂ ಕಡೆ ದ್ವಾರಪಾಲಕರನ್ನು ನಿಲ್ಲಿಸಲಾಗಿದೆ.

ಮುಂಭಾಗದಲ್ಲಿ ಎತ್ತರವಾದ ಸ್ತಂಭವಿದೆ. ಅದರ ಹಿಂಭಾಗದಲ್ಲಿ ಒಂದು ಅಡಿ ಜಗತಿಯ ಮೇಲೆ ಮತ್ತೊಂದು ಬಸವಣ್ಣನನ್ನು ಅಂದರೆ ನಂದಿಯನ್ನು ಇಡಲಾಗಿದೆ. ದೇವಾಲಯದ ಮೇಲೆ ಭಾವಣಿಯಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ನಂದಿಯ ಶಿಲ್ಪವನ್ನು ಇಡಲಾಗಿದೆ. ಅಲ್ಲದೇ ಮೇಲ್ಛಾವಣಿಯಲ್ಲಿ ೪ ದಿಕ್ಕುಗಳಲ್ಲಿಯೂ ಚಿಕ್ಕ ಚಿಕ್ಕ ಕೋಷ್ಠಕಗಳನ್ನು ಮಾಡಿ ಅಲ್ಲಿ ಈಶ್ವರ ಪಾರ್ವತಿ, ಈಶ್ವರ, ಗಣೇಶ ಮುಂತಾದ ಮೂರ್ತಿಗಳನ್ನು ಇಡಲಾಗಿದೆ.

೧೦

**ಊರು** : ಮಾಡಾಳು

**ಸ್ಥಳ** : ಊರಿನ ಪೂರ್ವಭಾಗ

**ಸ್ಮಾರಕದ ಹೆಸರು** : ಪಂಚಲಿಂಗೇಶ್ವರ ದೇವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.ಸುಮಾರು ೧೫-೧೬ನೇ ಶತಮಾನ

**ಸ್ಥಿತಿ** : ಮಧ್ಯಮ

ಕಣಕಟ್ಟೆ ಬಳಿಯ ಮಾಡಾಳು ಗ್ರಾಮದಲ್ಲಿ ಈ ದೇವಾಲಯವಿದ್ದು ಪೂರ್ವಾಭಿಮುಖ ವಾಗಿದೆ. ಇದು ಗರ್ಭಗೃಹವನ್ನು ಹೊಂದಿದ್ದು ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಉಳಿದ ೪ ಶಿವಲಿಂಗಗಳನ್ನು ಮುಂದೆ ಇಡಲಾಗಿದೆ. ಇಲ್ಲಿ ಗರ್ಭಗೃಹದ ಮುಂದಿನ ಬಲಪಕ್ಕದಲ್ಲಿ ಎರಡು ಶಿವಲಿಂಗಗಳು ಮತ್ತು ಎಡಪಕ್ಕದಲ್ಲಿ ಎರಡು ಶಿವಲಿಂಗಗಳನ್ನು ಇಡಲಾಗಿದೆ. ಮುಖ್ಯ ಗರ್ಭಗೃಹದ ಮುಂದಿನ ಭಾಗದಲ್ಲಿ ಎರಡು ನಂದಿ ಇಡಲಾಗಿದ್ದು ಒಂದು ದೊಡ್ಡ ನಂದಿ ಒಂದು ಚಿಕ್ಕ ನಂದಿಯಾಗಿದೆ. ಪಕ್ಕದಲ್ಲಿ ಎರಡು ಪಾದಗಳ ಗುರುತನ್ನು ಮೂಡಿಸಿರುವ ಶಿಲೆಯನ್ನು ಇಡಲಾಗಿದೆ. ಹಾಗೆಯೇ ಸತ್ತಮುತ್ತ ಗಣೇಶನ ಶಿಲ್ಪಗಳನ್ನು ಇಡಲಾಗಿದೆ. ದೇವಾಲಯದ ಮೇಲ್ಭಾವಣಿಯಲ್ಲಿ ಈಶ್ವರ ಪಾರ್ವತಿ, ಗಣೇಶ ಇರುವಂತಹ ಶಿಲ್ಪಗಳನ್ನು ಒಂದೇ ಕೋಷ್ಟಕದಲ್ಲಿ ತೋರಿಸಲಾಗಿದೆ. ದೇವಾಲಯದ ಮೇಲೆ ಯಾವುದೇ ಶಿಖರವು ಕಂಡುಬರುವುದಿಲ್ಲ.

೧೧

**ಊರು** : ಜನ್ನಾವರ

**ಸ್ಥಳ** : ಊರಿನ ಹೊರಭಾಗ

**ಸ್ಮಾರಕದ ಹೆಸರು** : ಸೋಮೇಶ್ವರ ದೇವಾಲಯ

**ಅಭಿಮುಖ** : ದಕ್ಷಿಣ

**ಕಾಲ** : ಕ್ರಿ.ಶ.ಸುಮಾರು ೧೧-೧೨ನೇ ಶತಮಾನ

**ಸ್ಥಿತಿ** : ಉತ್ತಮ

ಕಣಕಟ್ಟೆ ಹೋಬಳಿಯ ಜನ್ನಾವರದಲ್ಲಿ ಈ ದೇವಾಲಯವು ಕಂಡುಬಂದಿದೆ. ಈ ದೇವಾಲಯವು ಹೊಯ್ಸಳರ ೨ನೇ ವೀರಬಲ್ಲಾಳನ ಆಳ್ವಿಕೆಯಲ್ಲಿ ನಿರ್ಮಾಣಗೊಂಡಿದೆ. ಮಹದೇವಣ್ಣ ಚಮ್ಮವುಗೆ ಎಂಬುವವನು ಈ ಜನ್ನಾವರದಲ್ಲಿ ಆಡಳಿತ ನಡೆಸುತ್ತಿದ್ದು, ಮಾರಿಶೆಟ್ಟಿಯು ಇಲ್ಲಿನ ಗೌಡನಾಗಿದ್ದು, ಈತನು ಈತನ ಮಗನಾದ ತೈಲಶೆಟ್ಟಿಯ ಹೆಸರಿನಲ್ಲಿ ತೈಲೇಶ್ವರ ಎಂದು ಈ ದೇವಾಲಯ ನಿರ್ಮಿಸುತ್ತಾನೆ. ಈ ದೇವಾಲಯವು ಗರ್ಭಗೃಹ ಮತ್ತು ನವರಂಗವನ್ನು ಮತ್ತು ತೆರೆದ ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಸುಮಾರು ಒಂದು ಅಡಿ ಎತ್ತರದ ಶಿವಲಿಂಗವನ್ನು ಕಾಣುತ್ತೇವೆ. ಈ ಶಿವಲಿಂಗದ ಮೇಲೆ ಯಾವಾಗಲೂ ನೀರು ಬೀಳುವಂತೆ ಮಾಡಲು ಮೇಲಿನಿಂದ ತಾಮ್ರದ ತಂಬಿಗೆಯನ್ನು ಕಟ್ಟಿದ್ದಾರೆ. ಈ ಶಿವಲಿಂಗದ ಮುಂಭಾಗದಲ್ಲಿ ನವರಂಗದಲ್ಲಿ ೪ ಕಂಬಗಳಿವೆ. ಮತ್ತು ನವರಂಗವು ಎರಡು ದ್ವಾರಗಳನ್ನು ಹೊಂದಿದೆ. ದಕ್ಷಿಣಾಭಿಮುಖವಾಗಿರುವ ದ್ವಾರವು ಪ್ರಮುಖ ದ್ವಾರವಾಗಿದ್ದು, ಮತ್ತೊಂದು ದ್ವಾರವನ್ನು

ಪಶ್ಚಿಮಾಭಿಮುಖವಾಗಿ ಹೊಂದಿದೆ. ನವರಂಗದ ಸ್ತಂಭಗಳಲ್ಲಿನ ಗರ್ಭಗೃಹದ ಮುಂದಿನ ಎರಡು ಸ್ಥಂಭಗಳ ಮಧ್ಯದಲ್ಲಿ ೨ ನಂದಿಗಳು ಇವೆ. ಒಂದು ನಂದಿಯು ಸುಮಾರು ೨ ಅಡಿ ಎತ್ತರವಿದ್ದರೆ, ಮತ್ತೊಂದು ನಂದಿಯು ಒಂದು ಅಡಿ ಎತ್ತರವನ್ನು ಹೊಂದಿದೆ. ಮತ್ತು ಎರಡು ನಂದಿಗಳು, ಅಲಂಕಾರವನ್ನು ಹೊಂದಿದ್ದು, ದೊಡ್ಡ ನಂದಿಯು ಕೊರಳಿನಲ್ಲಿ ಗಂಟೆಯ ಹಾರವನ್ನು ಹೊಂದಿದೆ. ಮತ್ತು ಇಲ್ಲಿ ಏಕಶಿಲೆಯಲ್ಲಿ ಮಾಡಲಾಗಿರುವ ಸಪ್ತಮಾತೃಕೆಯರ ಶಿಲ್ಪಗಳನ್ನು ಇಡಲಾಗಿದೆ. ಗರ್ಭಗೃಹದಲ್ಲಿ ಮೊದಲು ಇದ್ದ ಮೂಲ ಶಿವನ ಮುಖಚಿತ್ರಣವನ್ನು ಹೊಂದಿದ್ದ ಶಿವಲಿಂಗವು ಭಿನ್ನವಾಗಿದ್ದರಿಂದ ಅದನ್ನು ನವರಂಗದ ಒಂದು ಪಾರ್ಶ್ವದಿಕ್ಕಿಗೆ ಸ್ಥಳಾಂತರಿಸಲಾಗಿದೆ. ನವರಂಗದ ಮುಂದೆ ತೆರೆದ ಮುಖ ಮಂಟಪವಿದೆ. ಇಲ್ಲಿ ೪ ಸಾಲಾಗಿ ೪ ಕಂಬಗಳಿವೆ. ಇಲ್ಲಿನ ದ್ವಾರದಲ್ಲಿ ದ್ವಾರಪಾಲಕರಿದ್ದಾರೆ. ದೇವಾಲಯದ ಮೇಲ್ಭಾವಣಿಯಲ್ಲಿ ಒಂದು ಕೋಷ್ಠಕವಿದ್ದು ಅದರೊಳಗೆ ಈಶ್ವರ ಪಾರ್ವತಿಯ ಶಿಲ್ಪವಿದೆ. ಮತ್ತು ಮೇಲ್ಛಾವಣಿಯ ೪ ಅಂಚುಗಳಲ್ಲೂ ನಂದಿಯ ಶಿಲ್ಪಗಳನ್ನು ಇಡಲಾಗಿದೆ. ಗರ್ಭಗೃಹದ ಮೇಲಿನ ಶಿಖರದಲ್ಲಿ ಬ್ರಹ್ಮ ವಿಷ್ಣುವಿನ ಶಿಲ್ಪಗಳನ್ನು ಕಾಣಬಹುದು. ಶಿಖರದ ಹಿಂಭಾಗದ ಮೇಲ್ಭಾವಣಿಯಲ್ಲಿನ ಎರಡೂ ಮೂಲೆಯಲ್ಲಿ ನವಿಲಿನ ಶಿಲ್ಪಗಳನ್ನು ಇಡಲಾಗಿದೆ.

**೩.೧.೩. ವೈಷ್ಣವ ದೇವಾಲಯಗಳು**

ವೈಷ್ಣವ ಧರ್ಮದ ಪ್ರತೀಕವಾಗಿ ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿ ವೈಷ್ಣವ ದೇವಾಲಯಗಳು ಕಂಡುಬರುತ್ತದೆ. ದೇವಾಲಯದ ಗರ್ಭಗುಡಿಯಲ್ಲಿ ಹೊಂದಿರುವ ಮೂಲ ದೇವತೆಗಳ ಆಧಾರದ ಮೇಲೆ ವಿವಿಧ ಮತಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳನ್ನು ಗುರುತಿಸಬಹುದು. ಕಣಕಟ್ಟೆ ಹೋಬಳಿ ಪರಿಸರದಲ್ಲಿ ನರಸಿಂಹಸ್ವಾಮಿ, ರಂಗನಾಥಸ್ವಾಮಿ, ಆಂಜನೇಯ, ಲಕ್ಷ್ಮೀನಾರಾಯಣ ದೇವಾಲಯಗಳು ಕಂಡುಬರುತ್ತವೆ.

೧

**ಊರು** : ಕಿತ್ತನಕೆರೆ

**ಸ್ಥಳ** : ಊರಿನ ಮಧ್ಯಭಾಗ

**ಸ್ಮಾರಕದ ಹೆಸರು:** ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.ಸುಮಾರು ೧೧-೧೨ನೇ ಶತಮಾನ

**ಸ್ಥಿತಿ** : ಕನಿಷ್ಠ

ಕಣಕಟ್ಟೆ ಹೋಬಳಿಯ ಮಧ್ಯಭಾಗದಲ್ಲಿ ಬರುವ ಕಿತ್ತನಕೆರೆಯಲ್ಲಿ ಲಕ್ಷ್ಮೀನರಸಿಂಹ ದೇವಾಲಯವಿದೆ. ಇದು ಹೊಯ್ಸಳ ದೊರೆ ಒಂದನೇ ನರಸಿಂಹನ ಕಾಲದಲ್ಲಿ ನಿರ್ಮಾಣವಾಗಿದ್ದು, ಹೊಯ್ಸಳರ ಆಡಳಿತಗಾರನಾಗಿದ್ದ ಬೊಪ್ಪದೇವನು ಇದನ್ನು ಕಟ್ಟಿಸಿದನು. ಕ್ರಿ.ಶ.೧೧೬೪ರಲ್ಲಿ ಈ ದೇವಾಲಯ ನಿರ್ಮಾಣವಾಗಿದೆ. ಪ್ರಸ್ತುತ ದೇವಾಲಯವು ಶಿಥಿಲಾವಸ್ಥೆಯಲ್ಲಿದ್ದು, ಒಳಗಿನ ಲಕ್ಷ್ಮೀನರಸಿಂಹನ ವಿಗ್ರಹವು ಭಗ್ನಗೊಂಡಿದೆ. ಹಾಗೆಯೇ ಕಟ್ಟಡವು ಅಲ್ಲಲ್ಲಿ ಬಿದ್ದು ಹೋಗಿದೆ. ದೇವಾಲಯದಲ್ಲಿ ಗರ್ಭಗುಡಿ ಮಾತ್ರ ಉಳಿದಿದ್ದು ಇದರ ಒಳಗಡೆ ಲಕ್ಷ್ಮೀನರಸಿಂಹನ ವಿಗ್ರಹವು ಪ್ರಭಾವಳಿಯೊಂದಿಗೆ ಇದೆ. ಇದನ್ನು ಸುಮಾರು ೨ ಅಡಿ ಎತ್ತರದ ಪೀಠದ ಮೇಲೆ ಇಡಲಾಗಿದೆ. ಈ ವಿಗ್ರಹದಲ್ಲಿ ನರಸಿಂಹನ ಮತ್ತು ಲಕ್ಷ್ಮೀಯ ಕೈಗಳು ಕತ್ತರಿಸಿವೆ (ಭಗ್ನಗೊಂಡಿವೆ). ದೇವಾಲಯದ ಸುತ್ತಮುತ್ತ ಗಿಡಗಳು ಬೆಳೆದುಕೊಂಡಿವೆ.

೨

**ಊರು** : ಕಣಕಟ್ಟೆ

**ಸ್ಥಳ** : ಊರಿನ ಮಧ್ಯಭಾಗ

**ಸ್ಮಾರಕದ ಹೆಸರು** : ಲಕ್ಷ್ಮೀನಾರಾಯಣ ದೇವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.ಸುಮಾರು ೧೫-೧೬ನೇ ಶತಮಾನ

**ಸ್ಥಿತಿ** : ಉತ್ತಮ

ಕಣಕಟ್ಟೆ ಊರಿನ ಮಧ್ಯಭಾಗದಲ್ಲಿ ಈ ದೇವಾಲಯವು ಇದ್ದು, ಇದು ಗರ್ಭಗೃಹ, ನವರಂಗ ಮತ್ತು ಯೋಗ ಸಾಧನ ಮಂಟಪವನ್ನು ಹೊಂದಿದೆ. ಇದೊಂದು ಏಕಕೂಟ ದೇವಾಲಯವಾಗಿದೆ. ಈ ದೇವಾಲಯದ ಎದುರಿಗೆ ನೇರವಾದ ಬೀದಿ ಇದೆ. ಗರ್ಭಗೃಹದಲ್ಲಿ ನಾರಾಯಣಮೂರ್ತಿ ಇದೆ. ತೊಡೆಯ ಮೇಲೆ ಲಕ್ಷ್ಮಿಯನ್ನು ಕೂರಿಸಿಕೊಂಡಿದ್ದು, ಪ್ರಭಾವಳಿಯಲ್ಲಿ ದಶಾವತಾರ ಚಿತ್ರಣವಿದೆ. ದೇವಾಲಯದ ಪಕ್ಕದಲ್ಲಿ ಲಕ್ಷ್ಮೀದೇವಿಗೆ ಪ್ರತ್ಯೇಕ ಗುಡಿ ಇದೆ. ಲಕ್ಷ್ಮೀನಾರಾಯಣ ಗುಡಿಯ ಎದುರಿಗೆ ಯೋಗಸಾಧನ ಮಂಟಪವಿದೆ. ಇದರೊಳಗೆ ಒಂದು ನೆಲಮನೆ ಇದ್ದು, ಮೆಟ್ಟಿಲುಗಳನ್ನು ಇಳಿದು ಇಲ್ಲಿಗೆ ತಲುಪಬಹುದು. ಗರ್ಭಗೃಹದ ನಂತರ ನವರಂಗವಿದ್ದು, ೪ ಕಂಬಗಳನ್ನೊಳಗೊಂಡಿದೆ. ಮುಂದೆ ಮುಖಮಂಟಪವಿದೆ. ದೇವಾಲಯದ

ಶಿಖರದ ಮೇಲ್ಭಾವಣಿಯಲ್ಲಿ, ಗೋಡೆಯ ಮೇಲಾಗಲೀ ಯಾವುದೇ ಚಿತ್ರಗಳು, ಶಿಲ್ಪಗಳು ಕಂಡುಬರುವುದಿಲ್ಲ.

೩

**ಊರು** : ಕ್ಯಾತನಹಳ್ಳಿ

**ಸ್ಥಳ** : ಊರಿನ ಮಧ್ಯಭಾಗ

**ಸ್ಮಾರಕದ ಹೆಸರು** : ಆಂಜನೇಯ ದೇವಾಲಯ

**ಅಭಿಮುಖ** : ದಕ್ಷಿಣ

**ಕಾಲ** : ಕ್ರಿ.ಶ.ಸುಮಾರು ೧೫-೧೬ನೇ ಶತಮಾನ

**ಸ್ಥಿತಿ** : ಉತ್ತಮ

ಈ ದೇವಾಲಯವು ಅತ್ಯಂತ ಸರಳವಾದ ವಾಸ್ತುವಿನಿಂದ ಕೂಡಿದ್ದು ಗರ್ಭಗೃಹವನ್ನು ಮಾತ್ರ ಹೊಂದಿದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯವು ಸುಮಾರು ೩ ಅಡಿ ಎತ್ತರದ ಆಂಜನೇಯನ ವಿಗ್ರಹವನ್ನು ಹೊಂದಿದೆ. ಆಂಜನೇಯ ಆಭರಣಗಳನ್ನು ಧರಿಸಿದ್ದು, ಬಲಗೈಯನ್ನು ಚಪಡಹಸ್ತವನ್ನಾಗಿ ಎಡಗೈಯನ್ನು ಸೊಂಟದ ಮೇಲೆ ಇಟ್ಟು ನಿಂತಿರುವಂತೆ ಕೆತ್ತನೆ ಮಾಡಿದ್ದಾರೆ. ಆಂಜನೇಯನ ಬಾಲದಲ್ಲಿ ಘಂಟೆಗಳನ್ನು ಕಟ್ಟಲಾಗಿದೆ.

೪

**ಊರು** : ಕಲ್ಲುಗುಂಡಿ

**ಸ್ಥಳ** : ಊರಿನ ಮಧ್ಯಭಾಗ

**ಸ್ಮಾರಕದ ಹೆಸರು** : ಆಂಜನೇಯ ದೇವಾಲಯ

**ಅಭಿಮುಖ** : ದಕ್ಷಿಣ

**ಕಾಲ** : ಕ್ರಿ.ಶ.ಸುಮಾರು ೧೫-೧೬ನೇ ಶತಮಾನ

**ಸ್ಥಿತಿ** : ಉತ್ತಮ

ಈ ದೇವಾಲಯವು ದಕ್ಷಿಣಾಭಿಮುಖವಾಗಿದ್ದು ಗರ್ಭಗೃಹವನ್ನು ಮಾತ್ರ ಒಳಗೊಂಡಿದೆ. ಇದರಲ್ಲಿ ಸುಮಾರು ೩ ಅಡಿ ಎತ್ತರದ ಆಂಜನೆಯನಿದ್ದು, ಇದಕ್ಕೆ ಚಿನ್ನದ ಬಣ್ಣದ ಲೇಪನ ಮಾಡಲಾಗಿದೆ. ಮತ್ತು ಆಂಜನೇಯನ ಸುತ್ತಲೂ ಪ್ರಭಾವಳಿಯನ್ನು ಮಾಡಲಾಗಿದೆ. ಆಂಜನೇಯನು ತನ್ನ ಬಲ ಹಸ್ತವನ್ನು ಚಪಡಹಸ್ತವಾಗಿ ಮೇಲೆತ್ತಿದ್ದಾನೆ. ಎಡಹಸ್ತವು ಸೊಂಟದ ಮೇಲಿದ್ದು, ಕೈಯಲ್ಲಿ ಗದೆಯನ್ನು ಹಿಡಿದಿದ್ದಾನೆ. ಮತ್ತು ಅನೇಕ ಆಭರಣಗಳನ್ನು ಧರಿಸಿದ್ದಾನೆ.

ಊರು : ಜಯಚಾಮರಾಜಪುರ(ಜೆ.ಸಿ.ಪುರ)

ಸ್ಥಳ : ಊರಿನ ವಾಯವ್ಯ ಭಾಗ

ಸ್ಮಾರಕದ ಹೆಸರು : ಬಿಳಿಕಲ್ಲು ರಂಗನಾಥಸ್ವಾಮಿ ದೇವಾಲಯ

ಅಭಿಮುಖ : ಪೂರ್ವ

ಕಾಲ : ಕ್ರಿ.ಶ.ಸುಮಾರು ೧೫–೧೬ನೇ ಶತಮಾನ

ಸ್ಥಿತಿ : ಉತ್ತಮ

ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿ ಕಂಡುಬರುವ ಈ ದೇವಾಲಯವು ಇಲ್ಲಿನ ಅಂದರೆ ಈ ಹೋಬಳಿಯ ಉಳಿದ ದೇವಾಲಯಗಳಿಗೆ ಹೋಲಿಕೆ ಮಾಡಿದಾಗ ದೊಡ್ಡ ದೇವಾಲಯವಾಗಿ ಗೋಚರಿಸುತ್ತದೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪವನ್ನು ಹೊಂದಿದೆ. ದೇವಾಲಯವು ಪೂರ್ವಕ್ಕೆ ಮುಖ ಮಾಡಿದ್ದು, ಗರ್ಭಗುಡಿಯಲ್ಲಿ ರಂಗನಾಥಸ್ವಾಮಿಯ ಸುಮಾರು ೨ ಅಡಿ ಎತ್ತರದ ಕಪ್ಪುಶಿಲೆಯಿಂದ ಮಾಡಿದ ವಿಗ್ರಹವಿದೆ. ರಂಗನಾಥಸ್ವಾಮಿಯು ಸ್ಥಾನಿಕ ಭಂಗಿಯಲ್ಲಿದೆ. ಅದರ ಸುತ್ತಲೂ ಚಿನ್ನದ ಬಣ್ಣ ಲೇಪನದ ಪ್ರಭಾವಳಿ ಇದೆ.

ಗರ್ಭಗೃಹದ ನಂತರ ಅಂತರಾಳವಿದ್ದು ಅದರ ಮುಂದೆ ನವರಂಗವು ಕಂಡುಬರುತ್ತದೆ. ಈ ನವರಂಗದಲ್ಲಿ ೪ ಕಂಬಗಳಿದ್ದು, ಅಲಂಕಾರ ರಹಿತವಾಗಿವೆ. ಅಂತರಾಳದ ಬಲಪಕ್ಕದ ಪಾರ್ಶ್ವದ ಕೋಣೆಯಲ್ಲಿ ರಂಗನಾಥಸ್ವಾಮಿಯ ಉತ್ಸವ ಮೂರ್ತಿಯನ್ನು ಇಡಲಾಗಿದೆ. ರಂಗನಾಥನ ಎಡ, ಬಲ ಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿ ಮೂರ್ತಿಗಳನ್ನು ಇಡಲಾಗಿದೆ. ನವರಂಗದ ಎಡಪಾರ್ಶ್ವದ ಒಂದು ಕೋಣೆಯಲ್ಲಿ ಹನುಮಂತನನ್ನು ಪ್ರತಿಷ್ಠಾಪಿಸಲಾಗಿದೆ. ಮತ್ತೊಂದು ಕೋಣೆಯಲ್ಲಿ ಕೆಂಚಪ್ಪ ದೇವರ ಉತ್ಸವದ ಮುಖವಾಡಗಳನ್ನು ಇಡಲಾಗಿದೆ. ನವರಂಗದ ಮುಂದಿನ ಮುಖಮಂಟಪದ ಲಲಾಟ ಬಿಂಬದಲ್ಲಿ ಗಜಲಕ್ಷ್ಮೀಯ ಚಿತ್ರಣವಿದೆ. ಮತ್ತು ಮುಖ ಮಂಟಪದ ದ್ವಾರದಲ್ಲಿ, ನವರಂಗದ ದ್ವಾರದಲ್ಲಿ ದ್ವಾರಪಾಲಕರು ಇದ್ದಾರೆ. ಈ ಮುಖಮಂಟಪದಲ್ಲಿ ೮ ಕಂಬಗಳು ಕಂಡುಬರುತ್ತದೆ. ಈ ಕಂಬಗಳೆಲ್ಲವೂ ಸಾಧಾರಣವಾಗಿವೆ.

ಈ ದೇವಾಲಯದ ಗರ್ಭಗುಡಿಯ ಹಿಂದೆ ಹೊರಗಿನ ಭಾಗದಲ್ಲಿ ಬಿಳಿಯ ಕಲ್ಲುಗಳು ಉದ್ಭವವಾಗಿದ್ದು, ಇದನ್ನೆ ರಂಗನಾಥಸ್ವಾಮಿಯ ಮೂಲ ಸನ್ನಿಧಿ ಎಂದು ಹೇಳಲಾಗುತ್ತದೆ. ಈ ಕಲ್ಲುಗಳು ತಾವಾಗಿಯೇ ಉದ್ಭವವಾಗಿರುವುದು ಎಂದು ಹೇಳಲಾಗುತ್ತದೆ. ಹಾಗಾಗಿ ಈ ದೇವಾಲಯಕ್ಕೆ ಬಿಳಿಕಲ್ಲು ರಂಗನಾಥಸ್ವಾಮಿ ಎಂದು ಕರೆಯುತ್ತಾರೆ.

ದೇವಾಲಯದ ಮೇಲ್ಭಾವಣಿಯಲ್ಲಿ ಸುತ್ತಲೂ ಅನೇಕ ಕೋಷ್ಟಗಳನ್ನು ಮಾಡಲಾಗಿದ್ದು, ಅದರಲ್ಲಿ ದ್ವಾರದ ಮೇಲಿನ ಮಧ್ಯದ ಕೋಷ್ಟದಲ್ಲಿ ವಿಷ್ಣು, ಶ್ರೀದೇವಿ, ಭೂದೇವಿಯ ಮೂರ್ತಿಗಳನ್ನು ಕಾಣುತ್ತೇವೆ. ಉಳಿದ ಭಾಗಗಳಲ್ಲಿ ವಿಷ್ಣುವಿನ ದಶಾವತಾರ ಮೂರ್ತಿಶಿಲ್ಪಗಳಾದ ವರಹಾ, ಮತ್ಸ, ಕೂರ್ಮ, ಕೃಷ್ಣ, ವಾಮನ ಇನ್ನೂ ಮುಂತಾದ ಮೂರ್ತಿಶಿಲ್ಪಗಳು ಕಂಡುಬರುತ್ತವೆ. ದೇವಾಲಯದ ಸುತ್ತಲಿನ ಉಳಿದ ಮೇಲ್ಭಾವಣಿಯಲ್ಲಿ ದುರ್ಗಿ, ಆಂಜನೇಯ, ಸರಸ್ವತಿ ಮುಂತಾದ ಮೂರ್ತಿಶಿಲ್ಪಗಳು ಕಂಡುಬರುತ್ತದೆ. ಗರ್ಭಗೃಹದ ಮೇಲ್ಭಾಗದಲ್ಲಿನ ಶಿಖರದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಶಿಲ್ಪಗಳನ್ನು ಕೂರಿಸಲಾಗಿದೆ. ಬಲಭಾಗದಲ್ಲಿ ವೆಂಕಟೇಶ್ವರ ಶಿಲ್ಪವನ್ನು ಇಡಲಾಗಿದೆ. ಹಿಂದಿನ ಭಾಗದಲ್ಲಿ, ಕೈಯಲ್ಲಿ ಶಂಖ, ಚಕ್ರಧಾರಿತ ವಿಷ್ಣುವಿನ ಶಿಲ್ಪವು ನಿಂತಿರುವ ಭಂಗಿಯಲ್ಲಿದ್ದು, ನಾಲ್ಕು ಭಾಗಗಳಲ್ಲಿಯೂ ಅಷ್ಟ ಲಕ್ಷ್ಮೀಯರ ಶಿಲ್ಪಗಳನ್ನು ಕಾಣಬಹುದಾಗಿದೆ.

ದೇವಾಲಯದ ಮುಂದಿನ ಬಲಭಾಗದಲ್ಲಿ ಕೆಂಚರಾಮಸ್ವಾಮಿಯ ಚಿಕ್ಕದಾದ ಗುಡಿಯಿದ್ದು, ಇದು ಗರ್ಭಗುಡಿಯನ್ನು ಮಾತ್ರ ಹೊಂದಿದ್ದು, ಅದರಲ್ಲಿ ಕೆಂಚರಾಯನ ಮುಖದ ವಿಗ್ರಹವನ್ನು ಮಾತ್ರ ಸುಮಾರು ಮೂರು ಅಡಿ ಎತ್ತರದಲ್ಲಿ ಇಡಲಾಗಿದೆ. ಇದರ ಸುತ್ತಲೂ ಪ್ರಭಾವಳಿಯನ್ನು ಮಾಡಲಾಗಿದೆ.

ಈ ದೇವಾಲಯದ ಮೇಲ್ಭಾಗದಲ್ಲಿಯೂ ಅನೇಕ ಕೋಷ್ಟಗಳನ್ನು ಮಾಡಲಾಗಿದ್ದು, ಇದರಲ್ಲಿ ಒಬ್ಬ ವ್ಯಕ್ತಿಯ ಶಿಲ್ಪವಿದ್ದು, ಬಲಹಸ್ತದಲ್ಲಿ ಕತ್ತಿ, ಎಡಹಸ್ತದಲ್ಲಿ ಗುರಾಣಿಯನ್ನು ಹಿಡಿದು ಕುಳಿತಿರುವುದಾಗಿದೆ. ಉಳಿದ ಭಾಗಗಳಲ್ಲಿ ಶಂಖ ಚಕ್ರಗಳ ದೊಡ್ಡ ದೊಡ್ಡ ಚಿತ್ರಗಳನ್ನು ಕಾಣುತ್ತೇವೆ.

೬

**ಊರು** : ಕರಡಿಹಳ್ಳಿ

**ಸ್ಥಳ** : ಊರಿನ ಮಧ್ಯಭಾಗ

**ಸ್ಮಾರಕದ ಹೆಸರು:** ಆಂಜನೇಯಸ್ವಾಮಿ ದೇವಾಲಯ

**ಅಭಿಮುಖ** : ದಕ್ಷಿಣ

**ಕಾಲ** : ಕ್ರಿ.ಶ.ಸುಮಾರು ೨೦ನೇ ಶತಮಾನ

**ಸ್ಥಿತಿ** : ಉತ್ತಮ

ಕಣಕಟ್ಟೆ ಹೋಬಳಿಯ ಗಡಿಯಲ್ಲಿ ಕಂಡುಬರುವ ಕರಡಿಹಳ್ಳಿಯಲ್ಲಿ ಆಂಜನೇಯನ ದೇವಾಲಯವೇ ಪ್ರಮುಖ ದೇವಾಲಯವಾಗಿದೆ. ಇಲ್ಲಿ ಇದನ್ನು ಬಿಟ್ಟರೆ ಬೇರೆ ದೇವಾಲಯಗಳು ಕಂಡುಬರುವುದಿಲ್ಲ. ಈ ದೇವಾಲಯವು ಗರ್ಭಗೃಹ, ನವರಂಗ ಮತ್ತು ತೆರೆದ ಮುಖಮಂಟಪವನ್ನು ಹೊಂದಿದೆ. ಮತ್ತು ಆಧುನಿಕ ಶೈಲಿಯಲ್ಲಿ ನಿರ್ಮಾಣವಾಗಿದೆ. ದೇವಾಲಯವು ದಕ್ಷಿಣಾಭಿಮುಖ

ವಾಗಿದ್ದು, ಸುಮಾರು ೩ ಅಡಿ ಎತ್ತರದ ಆಂಜನೇಯನ ಕಪ್ಪುಶಿಲೆಯಿಂದ ಮಾಡಿದ ವಿಗ್ರಹವನ್ನು ಹೊಂದಿದೆ. ಆಂಜನೇಯನ ತಲೆಯ ಮೇಲೆ ಬೆಳ್ಳಿಯಿಂದ ಮಾಡಿದ ಕಿರೀಟವನ್ನು ಇಡಲಾಗಿದೆ. ಆಂಜನೇಯನು ಬಲಗೈಯನ್ನು ಚಪಡ ಹಸ್ತವನ್ನಾಗಿ ಹಿಡಿದಿದ್ದು ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದಾನೆ. ಗರ್ಭಗೃಹದ ನಂತರ ನವರಂಗವು ಕಂಡುಬರುವುದು. ಇಲ್ಲಿ ೪ ಕಂಬಗಳಿದ್ದು, ಇವುಗಳು ಆಧುನಿಕ ಶೈಲಿಯಲ್ಲಿದ್ದು, ಬಸವೇಶ್ವರ ಚಿತ್ರವನ್ನು ಹೊಂದಿದೆ. ಮತ್ತು ಇಲ್ಲಿ ಅಲ್ಲಿನ ಸ್ಥಳೀಯ ದೇವತೆಗಳನ್ನು ಕುರ್ಚಿಯ ಮೇಲೆ ಕೂರಿಸಲಾಗಿದೆ. ನವರಂಗದ ಮುಂದೆ ತೆರೆದ ಮಂಟಪವಿದ್ದು ಇಲ್ಲಿ ೬ ಕಂಬಗಳು ಕಂಡುಬರುತ್ತವೆ. ದೇವಾಲಯದ ಮೇಲ್ಛಾವಣಿಯಲ್ಲಿನ ಕೋಷ್ಟದಲ್ಲಿ ರಾಮ ಸೀತೆ ಮತ್ತು ಆಂಜನೇಯನ ಶಿಲ್ಪಗಳಿವೆ. ಎಡ ಮತ್ತು ಬಲಭಾಗದ ಮೂಲೆಯ ಅಂಚುಗಳಲ್ಲಿ ಆಂಜನೇಯನ ಶಿಲ್ಪಗಳನ್ನು ಕೋಷ್ಟಗಳಲ್ಲಿ. ಹಾಗೆಯೇ ಇಡಲಾಗಿದೆ. ಮೇಲ್ಛಾವಣಿಯ ಹಿಂದಿನ ೪ ಭಾಗದಲ್ಲಿ ಎರಡು ದೇಹವನ್ನು ಹೊಂದಿ ಒಂದೇ ಶಿರವನ್ನು ಹೊಂದಿದಂತಹ ನಂದಿಯ ಶಿಲ್ಪಗಳನ್ನು ಕಾಣುತ್ತೇವೆ. ಗರ್ಭಗೃಹದ ಮೇಲೆ ಶಿಖರವಿದ್ದು, ಇಲ್ಲಿ ಯಾವುದೇ ಚಿತ್ರಗಳಾಗಲೀ, ಶಿಲ್ಪಗಳಾಗಲಿ ಕಂಡುಬರುವುದಿಲ್ಲ. ಮುಖಮಂಟಪದ ದ್ವಾರದಲ್ಲಿ ದ್ವಾರಪಾಲಕರು ನಿಂತಿದ್ದಾರೆ. ಮತ್ತು ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವನ್ನು ಇಡಲಾಗಿದೆ.

### ೩.೧.೪. ಶಾಕ್ತ ದೇವಾಲಯಗಳು

ಇಂದು ಭಾರತ ದೇಶದಲ್ಲೆಲ್ಲಾ ಹಿಂದೂಗಳಲ್ಲಿ ಶಾಕ್ತ ಸಂಪ್ರದಾಯ ಒಂದು ವಿಶಿಷ್ಟ ಆಚರಣೆಯಾಗಿದೆ. ಶಕ್ತಿಯ ಅಂದರೆ ಮಾತೃ ಸ್ವರೂಪಳಾದ ಸ್ತ್ರೀ ದೇವತೆಯು ನಾನಾ ಸ್ವರೂಪದಲ್ಲಿ ಆರಾಧಿಸಲ್ಪಡುವುದಲ್ಲದೇ, ದೇಶದ ಬೇರೆ ಬೇರೆ ಭಾಗಗಳಲ್ಲಿ ಅಸಂಖ್ಯಾತ ದೇಗುಲಗಳನ್ನು ನಿರ್ಮಿಸಿರುವುದು ಸುವಿಧಿತ. ಪ್ರಸ್ತುತ ನನ್ನ ಅಧ್ಯಯನದ ಕ್ಷೇತ್ರವಾದ ಕಣಕಟ್ಟೆ ಹೋಬಳಿಯಲ್ಲಿಯೂ ಅನೇಕ ಶಾಕ್ತ ದೇವಾಲಯಗಳು ಕಂಡುಬರುತ್ತದೆ.

೧

**ಊರು** : ಹೊಳಲ್ಕೆರೆ

**ಸ್ಥಳ** : ಊರಿನ ಉತ್ತರ ಭಾಗದಲ್ಲಿ

**ಸ್ಮಾರಕದ ಹೆಸರು** : ಮುಕ್ಕಣ್ಣೇಶ್ವರಿ ದೇವಾಲಯ

**ಅಭಿಮುಖ** : ಉತ್ತರ

**ಕಾಲ** : ಕ್ರಿ.ಶ.ಸುಮಾರು ೧೮–೧೯ನೇ ಶತಮಾನ

**ಸ್ಥಿತಿ** : ಉತ್ತಮ(ಜೀರ್ಣೋದ್ಧಾರವಾಗಿದೆ)

ಈ ದೇವಾಲಯವು ಉತ್ತರಾಭಿಮುಖವಾಗಿದ್ದು, ಗರ್ಭಗೃಹ ವಿಶಾಲವಾದ ನವರಂಗವನ್ನು ಹೊಂದಿದೆ. ಮತ್ತು ಪ್ರದೇಶದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಚಿತ್ರಣವಿದೆ. ದ್ವಾರದ ಎರಡೂ ಬದಿಯಲ್ಲಿಯೂ ದ್ವಾರಪಾಲಕರನ್ನು ಕೆತ್ತಲಾಗಿದೆ. ಗರ್ಭಗೃಹದಲ್ಲಿ ಮುಕ್ಕಣ್ಣೇಶ್ವರಿಯ ಮೂಲ ವಿಗ್ರಹಗಳನ್ನು ಇಡಲಾಗಿದೆ. ಇಲ್ಲಿ ಈ ದೇವತೆಯನ್ನು ದೊಡ್ಡಮ್ಮ ಮತ್ತು ಸಣ್ಣಮ್ಮ ಎಂದು ಪೂಜಿಸುವುದರಿಂದ ಗರ್ಭಗೃಹದಲ್ಲಿ ಈ ಎರಡೂ ದೇವತೆಗಳ ವಿಗ್ರಹಗಳು ಕಂಡುಬರುತ್ತದೆ. ಇವುಗಳನ್ನು ಕಪ್ಪುಶಿಲೆಯಿಂದ ಮಾಡಲಾಗಿದೆ. ಮುಕ್ಕಣೇಶ್ವರಿ ಅಥವಾ ಮೂರುಕಣ್ಣು ಮಾರಿ ಎಂದು ಈ ದೇವತೆಯನ್ನು ಕರೆಯುತ್ತಾರೆ. ಈ ದೇವಿಯ ಹಣೆಯಲ್ಲಿ ಅಡ್ಡಡ್ಡವಾಗಿ ಒಂದು ಕಣ್ಣು ಕಂಡುಬರುತ್ತದೆ. ಅದಕ್ಕಾಗಿ ಈ ರೀತಿಯಲ್ಲಿ ಈ ದೇವಿಯನ್ನು ಕರೆಯುತ್ತಾರೆ. ವಿಗ್ರಹಗಳ ಹಿಂದೆ ಪ್ರಭಾವಳಿಯನ್ನು ಇಡಲಾಗಿದೆ. ದೇವಾಲಯವು ಆಧುನಿಕ ಶೈಲಿಯಲ್ಲಿ ರೂಪುಗೊಂಡಿದೆ. ಪ್ರವೇಶದ್ವಾರದ ಎರಡೂ ಕಡೆಯಲ್ಲಿಯೂ ಸಿಂಹದ ಮೇಲೆ ತ್ರಿಶೂಲ ಹಿಡಿದು ನಿಂತಿರುವ ದುರ್ಗಿಯ ಮೂರ್ತಿಗಳಿವೆ. ನವರಂಗದ ಮುಂದೆ ತೆರೆದ ಮುಖಮಂಟಪವಿದೆ. ದೇವಾಲಯದ ಮೇಲ್ಛಾವಣಿಯಲ್ಲಿ ಕೋಷ್ಟಗಳನ್ನು ಮಾಡಿ ಅಲ್ಲಿ ದುರ್ಗಿಯ, ಅಷ್ಟಲಕ್ಷ್ಮೀಯರ, ಚಾಮುಂಡೇಶ್ವರಿಯ ಮೂರ್ತಿಗಳನ್ನು ಇಡಲಾಗಿದೆ. ದೇವಾಲಯದ ಮುಂದೆ ಒಂದು ಕಟ್ಟೆಯ ರೀತಿ ಮಾಡಿ ೩ ಕಲ್ಲುಗಳನ್ನು ಇಡಲಾಗಿದ್ದು, ಇದನ್ನು ಮುಕ್ಕಣ್ಣೇಶ್ವರಿ ದೇವಿಯ ಮಕ್ಕಳು ಎಂದು ಕರೆಯುವ ಪ್ರತೀತಿ ಇದೆ.

೨

**ಊರು** : ಮಾಡಾಳು

**ಸ್ಥಳ** : ಊರಿನ ಮಧ್ಯಭಾಗ

**ಸ್ಮಾರಕದ ಹೆಸರು** : ಶ್ರೀಸ್ವರ್ಣಗೌರಿ ದೇವಾಲಯ

**ಅಭಿಮುಖ** : ಪೂರ್ವ

**ಕಾಲ** : ಕ್ರಿ.ಶ.ಸುಮಾರು ೧೭-೧೮ನೇ ಶತಮಾನ

**ಸ್ಥಿತಿ** : ಉತ್ತಮ

ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ, ನವರಂಗ, ಮುಖಮಂಟಪ ಗಳನ್ನು ಹೊಂದಿದೆ. ಆಧುನಿಕ ಶೈಲಿಯಲ್ಲಿ ನಿರ್ಮಾಣಗೊಂಡಿರುವ ಈ ದೇವಾಲಯದ ಗರ್ಭಗೃಹದಲ್ಲಿ ಸ್ವರ್ಣಗೌರಿಯನ್ನು ಇಡಲಾಗಿದೆ. ಮುಂದೆ ಅಂತರಾಳವಿದ್ದು, ಅದರ ಮುಂದೆ ನವರಂಗದಲ್ಲಿ ೪ ಕಂಬಗಳಿವೆ. ಇದು ಆಧುನಿಕ ಶೈಲಿಯಲ್ಲಿದೆ. ಮುಂದೆ ಮುಖಮಂಟಪ ಕಂಡುಬರುತ್ತದೆ. ದೇವಾಲಯದ ಗೋಡೆಯ ಮೇಲೆ ಯಾವುದೇ ಮೂರ್ತಿಶಿಲ್ಪಗಳು

ಕಂಡುಬರುವುದಿಲ್ಲ. ದೇವಾಲಯದ ಮೇಲ್ಭಾವಣಿಯ ಕೋಷ್ಠಗಳಲ್ಲಿ ಸ್ವರ್ಣಗೌರಿಯ ಮೂರ್ತಿಶಿಲ್ಪ, ಬಸವಣ್ಣನವರ ಮೂರ್ತಿಯು ಕಂಡುಬರುತ್ತದೆ. ದೇವಾಲಯದ ಮುಂದೆ ಕರ್ಪೂರವನ್ನು ಸುಡಲು ಮತ್ತು ದುಗ್ಗಳವನ್ನು ಹೊರುವುದಕ್ಕೆ ಕೆಂಡ ಮಾಡಲು ಕಟ್ಟೆಯನ್ನು ಮಾಡಲಾಗಿದೆ.

೩

ಊರು : ಚೌಡಿಪಾಳ್ಯ

ಸ್ಥಳ : ಊರಿನ ಮಧ್ಯಭಾಗ

ಸ್ಮಾರಕದ ಹೆಸರು: ಚೌಡಮ್ಮ ದೇವಾಲಯ

ಅಭಿಮುಖ : ಪೂರ್ವ

ಕಾಲ : ಕ್ರಿ.ಶ.ಸುಮಾರು ೧೮-೧೯ನೇ ಶತಮಾನ

ಸ್ಥಿತಿ : ಉತ್ತಮ

ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿನ ಕೊನೆಯಲ್ಲಿ ಕಂಡುಬರುವ ಚೌಡಿಪಾಳ್ಯದಲ್ಲಿ ಈ ಚೌಡಮ್ಮ ದೇವಿಯ ದೇವಾಲಯವಿದ್ದು, ಇದು ಪೂರ್ವಾಭಿಮುಖವಾಗಿದೆ. ದೇವಾಲಯವು ಗರ್ಭಗೃಹ, ನವರಂಗ, ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಚೌಡಮ್ಮ ದೇವಿಯ ಕಪ್ಪುಶಿಲೆಯಿಂದ ಮಾಡಿದ ವಿಗ್ರಹವಿದ್ದು, ಸುತ್ತಲೂ ಪ್ರಭಾವಳಿಯನ್ನು ಹೊಂದಿದೆ. ಈ ವಿಗ್ರಹಕ್ಕೆ ಹಿತ್ತಾಳೆಯಿಂದ ಮಾಡಿದ ಮುಖವಾಡವನ್ನು ಹಾಕಲಾಗಿರುತ್ತದೆ. ಮತ್ತು ಆಭರಣಗಳನ್ನು ತೊಡಿಸಲಾಗಿದೆ. ದೇವಿಯ ಸುತ್ತಲೂ ಬೇವಿನ ಸೊಪ್ಪಿನಿಂದ ಅಲಂಕರಿಸಲಾಗಿದೆ. ನವರಂಗದಲ್ಲಿ ಕುರ್ಚಿಯಲ್ಲಿ ಅಮ್ಮನನ್ನು(ದೇವಿಯನ್ನು) ಕೂರಿಸಲಾಗಿರುತ್ತದೆ. ಉತ್ಸವವಾದಾಗ ಈ ಅಮ್ಮನನ್ನು ಕರೆದುಕೊಂಡು ಹೋಗುತ್ತಾರೆ. ಮುಂದೆ ಮುಖಮಂಟಪವಿದ್ದು, ದೇವಾಲಯದಲ್ಲಿ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ.

### ೩.೨. ಮೂರ್ತಿಶಿಲ್ಪಗಳು



ಒಂದು ಪ್ರದೇಶದ ಸಂಸ್ಕೃತಿಯನ್ನು ಪ್ರತಿಬಿಂಬಿಸುವಲ್ಲಿ ದೇವಾಲಯಗಳು ಎಷ್ಟು ಪ್ರಾಮುಖ್ಯತೆ ಪಡೆದಿರುತ್ತವೆಯೋ, ಮೂರ್ತಿ ಶಿಲ್ಪಗಳು ಕೂಡ ಅಷ್ಟೇ ಪ್ರಮುಖವಾಗಿದೆ. ಇವುಗಳು ದೇವಾಲಯ ವಾಸ್ತುಶಿಲ್ಪದ ಅವಿಭಾಜ್ಯ ಅಂಗಗಳಾಗಿದ್ದು, ದೇವಾಲಯದ ಸೌಂದರ್ಯವನ್ನು, ಹೆಚ್ಚಿಸಿದೆ.[೩೦] ಜಗತ್ ಸೃಷ್ಟಿಯು ಯಾವಾಗ ಮೊದಲಾಯಿತೋ ಆಗಲೇ ಶಿಲ್ಪವು ಪ್ರಾರಂಭವಾಗಿದೆಯೆಂದು ವೇದವು ಹೇಳಿದೆ. ಜಗತ್ ಸೃಷ್ಟಿಯನ್ನು ಜಗತ್ ಶಿಲ್ಪ ಎಂದೂ ಈ ಜಗತ್ತಿನ ಸೃಷ್ಟಿಕರ್ತನನ್ನು ಜಗತ್ ಶಿಲ್ಪಿ ಎಂದು ವರ್ಣಿಸಿರುವುದುಂಟು. ಶಿಲ್ಪ ಎಂಬ ಪದವು 'ಶೀಲಸಮುದೌ' ಎಂಬ ಧಾತುವಿನಿಂದ ಉತ್ಪನ್ನವಾಗಿದೆ. ಸಮಾಧಿ ಎಂಬ ಅರ್ಥವುಳ್ಳ 'ಶಿಲ್' ಎಂಬ ಧಾತುವು,

ತಪಸ್ಸನ್ನು ಸೂಚಿಸುತ್ತದೆ. 'ಶೀಲ ಸಮುದೌ ಶೀಲ್ಯತಾ ಇತಿಶಿಲ್ಪ' ಮನಸ್ಸು ಸಮಾಧಿ ಸ್ಥಿತಿಯಲ್ಲಿದ್ದಾಗ ರೂಪಿತವಾಗುವ ಕರಕುಶಲ ವಸ್ತುವೇ ಶಿಲ್ಪ ಎಂದು ಹೇಳಿರುವುದು ಶಿಲ್ಪ ಶಬ್ಧದ ವ್ಯಾಪಕ ಅರ್ಥ ವಿಸ್ತಾರವನ್ನು ಈ ಹಂತದಲ್ಲಿ ಕಾಣಬಹುದು.[೩೧]

ಮೂರ್ತಿಶಿಲ್ಪವನ್ನುದ್ದೇಶಿಸಿ ಶಾಸ್ತ್ರೀಯವಾಗಿ ಹೇಳುವ ಶಿಲ್ಪಶಾಸ್ತ್ರ ಗ್ರಂಥಗಳನ್ನು ಕಾಣಬಹುದು. ಕಾಶ್ಯಪಶಿಲ್ಪ, ಮಾನಸಾರ, ಸಮಾರಾಂಗಣ ಸೂತ್ರಧಾರ, ಶಿಲ್ಪರತ್ನಂ ಮಯಮತಂ, ಮಯ ವಾಸ್ತುಶಾಸ್ತ್ರ ಇನ್ನೂ ಮುಂತಾದವುಗಳು.

ಭಾರತದಲ್ಲಿ ದೇವತಾರಾಧನೆ ಹಾಗೂ ವ್ಯವಸ್ಥಿತ ದೇವಾಲಯಗಳ ನಿರ್ಮಾಣಕಾರ್ಯ ಪ್ರಾರಂಭವಾದಂದಿನಿಂದ ದೇವತಾಮೂರ್ತಿಗಳ ಪ್ರತಿಷ್ಠಾಪನೆ ಹಾಗೂ ಆರಾಧನೆ ಆರಂಭವಾಯಿತು. ಪ್ರತಿಯೊಂದು ಪಂಥದ ದೇವಾಲಯದಲ್ಲಿ ಆಯಾ ಪಂಥದ ದೇವತಾಮೂರ್ತಿ ಇದ್ದೇ ಇರುತ್ತದೆ. ಇಂತಹ ಮೂರ್ತಿಗಳನ್ನು ಕುರಿತು ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಶಾಸ್ತ್ರವನ್ನು ಸ್ಥೂಲವಾಗಿ ಮೂರ್ತಿಶಿಲ್ಪಶಾಸ್ತ್ರ ಎನ್ನುತ್ತಾರೆ. ಸಾಮಾನ್ಯವಾಗಿ ಮೂರ್ತಿ ಎಂಬ ಶಬ್ಧಗಳನ್ನೊಳ ಗೊಂಡು ಅದಕ್ಕೆ ಪರ್ಯಾಯವಾಗಿ ಬಳಸಿದ ಶಬ್ಧಗಳಲ್ಲಿ 'ಮೂರ್ತಿ' ಎಂಬುದೊಂದು ಭೌತಿಕವಸ್ತು ಎಂದು ಪರಿಗಣಿಸಲಾಗಿದೆ. ಏಕೆಂದರೆ ದೇವತಾಮೂರ್ತಿ ಎಂಬ ಶಬ್ಧದಲ್ಲಿ ಮೂರ್ತಿಯೇ ದೇವತೆಯಲ್ಲ, ಮೂರ್ತಿ ದೇವತೆಯದು. ಈ ಕುರಿತು ಇರುವ 'ಪ್ರತಿಮಾ' 'ಬಿಂಬ' 'ಪ್ರತಿಕೃತಿ' 'ವಿಗ್ರಹ' ಮುಂತಾದ ಶಬ್ಧಗಳು ಇದನ್ನು ಇನ್ನೂ ಸ್ಪಷ್ಟವಾಗಿ ಸೂಚಿಸುತ್ತದೆ. ಇಲ್ಲಿ ಒಂದು ನಿರಾಕಾರ ಕಲ್ಪನೆಯನ್ನು ಯಥಾವತ್ತಾಗಿ ಅನುಕರಿಸಿ 'ಸಾಕಾರವಸ್ತು' ಎಂಬ ಪರಿಕಲ್ಪನೆಯಿದೆ.[೩೨]

ಮೂರ್ತಿ ಎಂಬ ಪದಕ್ಕೆ ಸಮನಾರ್ಥವಾಗಿ 'ಪ್ರತಿಮೆ' ಎಂಬ ಪದ ಬಳಕೆಯಲ್ಲಿದ್ದು ಮೂರ್ತಿಶಾಸ್ತ್ರವನ್ನು 'ಪ್ರತಿಮಾಶಾಸ್ತ್ರ' ಎಂದು ಕರೆಯಲಾಗಿದೆ. ಪ್ರತಿಮಾಶಾಸ್ತ್ರ ಅಥವಾ ಪ್ರತಿಮಾ ಲಕ್ಷಣ ಎಂದರೆ ಒಂದು ದೇವತೆಯ ಲಕ್ಷಣವನ್ನು ಮೂರ್ತಿ ರೂಪದಲ್ಲಿ ಪ್ರಮಾಣಬದ್ಧವಾಗಿ ಹೇಗೆ ಹಿಡಿಯಬೇಕೆಂಬುದನ್ನು ವಿಧಿಸುವ ಶಾಸ್ತ್ರ. ಅಂದರೆ ಮೂರ್ತಿ ಯಾವ ಯಾವ ಅಂಶಗಳನ್ನು ಹೊಂದಿರಬೇಕೆಂದು ತಿಳಿಸುತ್ತದೆ.[೩೩]

ಹಾಗಾಗಿ ಶಾಸ್ತ್ರೀಯ ನಿರೂಪಣೆಯ ಪ್ರಕಾರ ಮೂರ್ತಿಯು ಒಂದು ರೂಪ, ಒಂಬತ್ತು ಅಂಗಗಳನ್ನು ಒಳಗೊಂಡಿರಬೇಕು. ಅವುಗಳೆಂದರೆ ನ್ಯಾಸ (ರೂಪ ಸಂಯೋಜನೆ), ಅಲಂಕಾರ (ಆಭರಣ, ವಸ್ತ್ರ, ಕೇಶ ಮುಂತಾದವು), ಭಾಫಕಕ್ಷ (ಆಸನ), ಮುದ್ರಾ (ಹಸ್ತ ಮುದ್ರಿಕೆಗಳು), ಆಯುಧ (ದೇವತೆಯ ಕೈಯಲ್ಲಿರುವ ಆಯುಧಗಳು), ವಾಹನ (ದೇವತೆಯು ಸವಾರಿಗಾಗಿ

ಬಳಸುವ ಪ್ರಾಣಿಗಳು), ಉಪದೇವ (ಮುಖ್ಯ ದೇವತೆಯ ಜೊತೆ ತೋರಿಸುವ ಇತರ ಕಡಿಮೆ ಮಹತ್ವದ ದೇವತೆಗಳು. ಅಂದರೆ ಪುರುಷ ದೇವರ ಸಂದರ್ಭದಲ್ಲಿ ಅವರ ಸ್ತ್ರೀದೇವತೆಗಳು), ಅರಿ (ದೇವತೆಯ ವೈರಿ) ಹಾಗೂ ಸ್ತುವಕ (ಭಕ್ತರು ಹಾಗೂ ಇತರ ಸೇವಕರು). ಈ ಶಾಸ್ತ್ರೀಯ ಸಂಪ್ರದಾಯಕ್ಕನುಗುಣವಾಗಿಯೇ ದೇವತಾ ಮೂರ್ತಿಗಳು ರೂಪುಗೊಳ್ಳುತ್ತವೆ.

ಪ್ರತಿಯೊಂದು ದೇವಾಲಯದ ಗರ್ಭಗುಡಿಯಲ್ಲಿರುವ ಮೂರ್ತಿಯ ಹೆಸರೇ ದೇವಾಲಯದ ಹೆಸರಾಗಿರುತ್ತದೆ. ಸಾಮಾನ್ಯವಾಗಿ ವಿಗ್ರಹಗಳನ್ನು ಮೂರ್ತಿಶಿಲ್ಪ ಎನ್ನುತ್ತಾರೆ. ಬಿಡಿಶಿಲ್ಪಗಳು ದಿನನಿತ್ಯ ಪೂಜೆಗೊಳಪಡುವ ಮೂರ್ತಿಗಳು, ಕಂಬ, ಭಿತ್ತಿ, ಶಿಖರ ಮತ್ತು ಶಿಲಾಫಲಕಗಳ ಮೇಲೆ ನಿರ್ಮಿಸಿರುವ ಆಕೃತಿಗಳೆಲ್ಲವೂ ಶಿಲ್ಪಗಳಲ್ಲಿಯೇ ಬರುತ್ತದೆ.

ಚಾರಿತ್ರಿಕ ಯುಗಕ್ಕೆ ಬಂದಾಗ ಅತ್ಯಂತ ಪ್ರಾಚೀನವಾದ ಶಿಲ್ಪಕೃತಿಗಳು ಮೌರ್ಯರ ಕಾಲದವು. ಕಲ್ಲಿನ ಸ್ತಂಭಗಳು ಮೇಲಿನ ವೃಷಭ, ಆನೆ, ಸಿಂಹ, ಕುದುರೆ ಮೊದಲಾದ ಆಕೃತಿಗಳು ಪ್ರಮುಖವಾದವು. ಮೌರ್ಯರ ಶಕ್ತಿ ಇಳಿಮುಖವಾಗುತ್ತಿದ್ದಂತೆಯೇ ಶುಂಗರು, ಕುಶಾನರು, ಶಿಲ್ಪಕಲೆಗೆ ಆಶ್ರಯವನ್ನು ಕೊಟ್ಟರು. ಗುಪ್ತರ ಕಾಲವು ಶಿಲ್ಪ, ಸಾಹಿತ್ಯ, ವಿಜ್ಞಾನ ಎಲ್ಲಾ ದೃಷ್ಟಿಯಿಂದಲೂ ಸುವರ್ಣಯುಗವೆನ್ನಬಹುದು.

ಕರ್ನಾಟಕದ ಚಾರಿತ್ರಿಕ ಕಾಲದಲ್ಲಿ ಮೂರ್ತಿಶಿಲ್ಪದ ಬೆಳವಣಿಗೆಯನ್ನು ಗುರುತಿಸುವಾಗ ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರು ದೇವಾಲಯಗಳ ನಿರ್ಮಾಣಕ್ಕೆ ಕೊಟ್ಟ ಪ್ರೋತ್ಸಾಹದಂತೆ ಶಿಲ್ಪಗಳ ಬೆಳವಣಿಗೆಗೂ ಕೂಡ ಪ್ರೋತ್ಸಾಹ ನೀಡಿದ್ದಾರೆ.[೩೪]

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿ ವಿವಿಧ ರಾಜವಂಶಗಳ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳಲ್ಲಿ ವಿವಿಧ ರೀತಿಯ ಮೂರ್ತಿಶಿಲ್ಪಗಳು ಕಂಡುಬರುತ್ತಿದ್ದು, ಬಹಳ ಸುಂದರವಾಗಿ ಕೆತ್ತಿರುವುದರಿಂಧ ಶಿಲ್ಪಿಯ ಕೈಚಳಕ ಇದರಲ್ಲಿ ಎದ್ದು ಕಾಣುತ್ತಿದೆ. ಸಾಮಾನ್ಯವಾಗಿ ಶಿಲ್ಪಗಳನ್ನು ಶಿಲೆಗಳಿಂದ, ಲೋಹಗಳಿಂದ, ಗಾರೆಯಿಂದ ನಿರ್ಮಿಸಿದ್ದಾರೆ.

### ೩.೨.೧. ಶೈವಶಿಲ್ಪಗಳು

**ಶಿವಲಿಂಗ**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಶೈವದೇವಾಲಯಗಳೇ ಅತೀ ಹೆಚ್ಚು ಕಂಡುಬರುವುದರಿಂದ ಶಿವಲಿಂಗಗಳು ಕೂಡ ಹೆಚ್ಚು ಕಂಡುಬರುತ್ತವೆ. ಕಣಕಟ್ಟೆಯ ಶೃಂಗನಾಥೇಶ್ವರ, ಕಮಟೇಶ್ವರ, ಕಲ್ಲೇಶ್ವರ, ಭೈರೇದೇವರ ಗುಡಿ, ಮಾಡಾಳಿನ ಪಂಚಲಿಂಗೇಶ್ವರ, ಕಿತ್ತನಕೆರೆಯ ಶಿವಾಲಯ,

ಸಾಂತಗೆರೆಯ ಸೋಮೇಶ್ವರ, ಹೊಳಲ್ಕೆರೆಯ ಶ್ರೀರಾಮೇಶ್ವರ, ಗರುಡನಗಿರಿಯ ಶಂಕರೇಶ್ವರ, ಹಿರೇಸಾದರಹಳ್ಳಿಯ ಕೊಟ್ಟೂರು ಚನ್ನಬಸವೇಶ್ವರ, ಕ್ಯಾತನಹಳ್ಳಿಯ ಸಿದ್ಧೇಶ್ವರ ಮುಂತಾದ ದೇವಾಲಗಳಲ್ಲಿ ಸುಮಾರು ಒಂದು ಅಡಿ ಎತ್ತರದಿಂದ ಎರಡು ಅಡಿ ಎತ್ತರವಾದ ಸುಂದರವಾದ ಶಿವಲಿಂಗಗಳು ಕಂಡುಬರುತ್ತದೆ. ಸಾಮಾನ್ಯವಾಗಿ ಈ ಲಿಂಗಗಳನ್ನು ಒಂದು ಅಡಿ ಎತ್ತರದ ಪೀಠದ ಮೇಲೆ ಪ್ರತಿಷ್ಠಾಪಿಸಿದ್ದಾರೆ. ಎಲ್ಲಾ ಶಿವಲಿಂಗಗಳು ಕಪ್ಪುಶಿಲೆಯಿಂದ ಕೆತ್ತಲ್ಪಟ್ಟಿವೆ. ಪ್ರತಿ ಶಿವಲಿಂಗದ ಎದುರಾಗಿ ನವರಂಗದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಿದ್ದಾರೆ.

**ನಂದಿಶಿಲ್ಪಗಳು**

ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿ ಸಾಧಾರಣ ಸರಳ ಕೆತ್ತನೆಯಿಂದ ಕೂಡಿದ ನಂದಿ ವಿಗ್ರಹಗಳಿಂದ ಹಿಡಿದು ಹೆಚ್ಚು ಅಲಂಕೃತವಾಗಿ ಕೆತ್ತಲ್ಪಟ್ಟಿರುವ ನಂದಿಯ ಶಿಲ್ಪಗಳು ಕಂಡುಬರುತ್ತದೆ. ನಂದಿಯು ಶಿವನ ವಾಹನ. ಪುರಾಣಗಳಲ್ಲಿಯೂ ಶಿವನ ವಾಹನವಾದ ನಂದಿಯ ಪ್ರಸ್ತಾಪ ಕಂಡುಬರುತ್ತದೆ. ಪ್ರಸ್ತುತ ಅಧ್ಯಯನದ ಪ್ರದೇಶಗಳಲ್ಲಿ ನಂದಿ ಶಿಲ್ಪಗಳು ಶಿವ ದೇವಾಲಯದ ಅಂತರಾಳ ಮತ್ತು ನವರಂಗದಲ್ಲಿ ಕಂಡುಬರುತ್ತದೆ. ಈ ಶಿಲ್ಪಗಳನ್ನು ಬೆಣಚುಕಲ್ಲಿನಿಂದ ಹಾಗೂ ಕಪ್ಪುಶಿಲೆಯಿಂದ ಕೆತ್ತಲಾಗಿದೆ. ನಂದಿಯನ್ನು ಬಸವಣ್ಣ, ವೃಷಭ ಎಂದೂ ಕರೆಯುತ್ತಾರೆ. ಮಾಡಾಳಿನ ಪಂಚಲಿಂಗೇಶ್ವರ, ಹೊಳಲ್ಕೆರೆಯ ಶ್ರೀರಾಮೇಶ್ವರ, ಗರುಡನಗಿರಿಯ ಶಂಕರೇಶ್ವರ, ಹಿರೇಸಾದರಹಳ್ಳಿಯ ಕೊಟ್ಟೂರು ಚನ್ನಬಸವೇಶ್ವರ, ಕ್ಯಾತನಾಹಳ್ಳಿಯ ಸಿದ್ದೇಶ್ವರ, ಕಣಕಟ್ಟೆಯ ಶೃಂಗನಾಥೇಶ್ವರ, ಕಮಟೇಶ್ವರ, ಕಲ್ಲುಗುಂಡಿಯ ಮಹಾಲಿಂಗೇಶ್ವರ ಮುಂತಾದ ಎಲ್ಲ ಈಶ್ವರ ದೇವಾಲಯಗಳಲ್ಲಿ ಶಿವಲಿಂಗುವಿನ ಎದುರಿಗೆ ಮುಖ ಮಾಡಿರುವ ನಂದಿಗಳು ಕಂಡುಬರುತ್ತದೆ. ಮಾಡಾಳಿನ ಪಂಚಲಿಂಗೇಶ್ವರ ದೇವಾಲಯದಲ್ಲಿ ಅಂತರಾಳದಲ್ಲಿ ಎರಡು ಶಿವಲಿಂಗಗಳು ಕಂಡುಬರುತ್ತವೆ. ಕಲ್ಲುಂಡಿಯ ಮಹಾಲಿಂಗೇಶ್ವರ ದೇವಾಲಯದಲ್ಲಿ ನವರಂಗದಲ್ಲಿ ಒಂದು ನಂದಿ ಮತ್ತು ದೇವಾಲಯದ ಹೊರಭಾಗದಲ್ಲಿ ಮತ್ತೊಂದು ನಂದಿ ಕಂಡುಬರುತ್ತದೆ. ಹೊಳಲ್ಕೆರೆಯ ಶ್ರೀರಾಮೇಶ್ವರ ದೇವಾಲಯದಲ್ಲಿಯೂ ಇದೇ ರೀತಿ ಕಂಡುಬರುತ್ತದೆ. ಹಿರೇಸಾದರಹಳ್ಳಿಯ ಕೊಟ್ಟೂರು ಚನ್ನಬಸವೇಶ್ವರ ದೇವಾಲಯದಲ್ಲಿ ಶಿವಲಿಂಗವು ಉತ್ತರಕ್ಕೆ ಮುಖ ಮಾಡಿದ್ದರೆ, ನಂದಿಯು ಉತ್ತರಕ್ಕೆ ಮುಖಮಾಡಿರುವುದನ್ನು ಕಾಣುತ್ತೇವೆ.

ನಂದಿ ಶಿಲ್ಪಕ್ಕೆ ವಿವಿಧ ರೀತಿಯ ಅಲಂಕಾರವನ್ನು ಮಾಡಿರುತ್ತಾರೆ. ಸಾಮಾನ್ಯವಾಗಿ ನಂದಿ ಶಿಲ್ಪಗಳ ಹಣೆಯಲ್ಲಿ ಪಟ್ಟಿಯನ್ನು ಕೆತ್ತಲಾಗಿರುತ್ತದೆ, ಕೊರಳಲ್ಲಿ ಹೂವಿನ ಹಾರದ ಕೆತ್ತನೆ ಮತ್ತು ಕುತ್ತಿಗೆಗೆ ಘಂಟೆಸರವನ್ನು ಹಾಕಲಾಗಿರುತ್ತದೆ.

## ಗಣೇಶನ ವಿಗ್ರಹಗಳು

ಗಣೇಶನು ಪಾರ್ವತಿ ಮತ್ತು ಪರಮೇಶ್ವರನ ಪುತ್ರ, ಇಲಿಯನ್ನು(ಮೂಷಿಕ) ವಾಹನವನ್ನಾಗಿ ಹೊಂದಿದ್ದಾನೆ. ಆಗಮ ಬ್ರಾಹ್ಮಣ ಸೂತ್ರ, ಧರ್ಮಶಾಸ್ತ್ರಗಳಲ್ಲಿ ಗಣೇಶನ ಉಲ್ಲೇಖವಿದೆ. ಗಣೇಶನು ಪ್ರಾಚೀನ ಪರಂಪರೆ ಹೊಂದಿದ್ದು, ಆದಿ ದೇವತೆಗಳಲ್ಲಿ ಒಬ್ಬನಾಗಿದ್ದಾನೆ. ಪರಮೇಶ್ವರನ ಪುತ್ರ ವಿನಾಯಕನಾಗಿ ಮೆರೆದು, ಬುದ್ಧಿಶೀಲ ಬೃಹಸ್ಪತಿ ಎನಿಸಿಕೊಂಡಿದ್ದಾನೆ. ವೈದಿಕ ದೇವತೆಗಳೇ ಪುರಾಣ ಕಾಲದ ಗಜಮುಖ, ವಿನಾಯಕ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.

ಶಶಿವಾಳದಲ್ಲಿನ ಶ್ರೀಸಿದ್ದೇಶ್ವರ ಸ್ವಾಮಿಯ ಕ್ಷೇತ್ರದಲ್ಲಿ ದೇವಾಲಯದ ಹೊರಗೆ ಗೋಡೆಗೆ ಅಂಟಿಕೊಂಡಂತೆ ಕೋಷ್ಠಗಳನ್ನು ಮಾಡಲಾಗಿದ್ದು, ಇದರಲ್ಲಿನ ಒಂದು ಕೋಷ್ಠದಲ್ಲಿ ಗಣಪತಿಯ ಶಿಲ್ಪವಿದ್ದು, ಅದರ ಮುಂಭಾಗವನ್ನು ಬಿಟ್ಟು ಉಳಿದಂತೆ ೫ ಲಿಂಗಗಳನ್ನು ಇಡಲಾಗಿದೆ. ಇದನ್ನು ಪಂಚಲಿಂಗ ಗಣಪತಿ ಎಂದು ಕರೆಯಲಾಗಿದೆ. ಗಣಪತಿಯ ಶಿಲ್ಪವು ಚತುರ್ಭಾಹುವನ್ನು ಹೊಂದಿದ್ದು, ಕುಳಿತ ಭಂಗಿಯಲ್ಲಿದೆ. ಮೇಲ್ಭಾಗದ ಕೈಗಳು ಏಕ ರೀತಿಯಲ್ಲಿದ್ದು, ಮೋದಕವನ್ನು ಹಿಡಿದಂತೆ ಕಾಣುತ್ತದೆ. ಬಲಭಾಗದ ಮತ್ತೊಂದು ಹಸ್ತ ಅಭಯ ಹಸ್ತವಾಗಿದ್ದು, ಎಡಭಾಗದ ಹಸ್ತವು ವರದಾಹಸ್ತ ಮತ್ತು ಈ ವಿಗ್ರಹವು ಒಂದು ಅಡಿ ಎತ್ತರವನ್ನು ಹೊಂದಿದೆ.

ಪ್ರಸ್ತುತ ಅಧ್ಯಯನ ಪ್ರದೇಶಗಳಲ್ಲಿ ಕಂಡುಬರುವ ಗಣೇಶ ಶಿಲ್ಪಗಳು ಹೆಚ್ಚು ಸ್ಥಾನಿಕ ಶಿಲ್ಪಗಳಾಗಿದ್ದು ಸಮಭಂಗಿಯಲ್ಲಿವೆ.

ಗಣೇಶನ ವಿಗ್ರಹಗಳಲ್ಲಿ ಸಾಮಾನ್ಯವಾಗಿ ಚತುರ್ಭಾಹುಗಳಿದ್ದು, ಕುಳಿತ ಭಂಗಿಯಲ್ಲಿರುವ ಮೂರ್ತಿಗಳೇ ಹೆಚ್ಚು ಕಂಡುಬರುತ್ತವೆ. ವಿವಿಧ ಅಲಂಕರಣಗಳಿಂದ ಕೂಡಿದ ಗಣೇಶನು, ಸರಿ ಸುಮಾರು ಮೂರು ಅಡಿ ಎತ್ತರವುಳ್ಳವನಾಗಿದ್ದು ಅಗಲವಾದ ಕಿವಿ, ಇಳಿಬಿದ್ದ ಹೊಟ್ಟೆ ಹೊಂದಿದ್ದು, ಸುಖಾಸೀನ ಭಂಗಿಯಲ್ಲಿ ಕುಳಿತು ಕಾಲ್ಗಡಗ, ಕಂಠೀಹಾರ, ತಲೆಗೆ ಕರಂಡಮುಕುಟವನ್ನು ಧರಿಸಿ, ಕೈಕಂಕಣ, ಉದರದಲ್ಲಿ ನಾಗಬಂಧವನ್ನು ಧರಿಸಿರುತ್ತಾನೆ. ಸೊಂಡಿಲಿನ ವಿನ್ಯಾಸ ಬಲಗಡೆಗೆ ಬಾಗಿರುತ್ತದೆ. ಗಿಡ್ಡಾಕೃತಿಯ ಸ್ಥೂಲಕಾಯ, ದಪ್ಪ ತೋಳುಗಳು, ಎದ್ದುಕಾಣುವ ಡೊಳ್ಳು ಹೊಟ್ಟೆ, ಕೆಳಭಾಗದಲ್ಲಿ ಪೀಠದ ಮೇಲೆ ಕೂರಿಸಲಾಗಿರುತ್ತದೆ. ಹೀಗೆ ಆಕರ್ಷಕವಾದ ಮೈಕಟ್ಟನ್ನು ಕಡೆದು, ಉತ್ತಮ ಶಿಲ್ಪಕೃತಿಗಳಾಗಿ ಕಂಡುಬರುತ್ತದೆ. ತನ್ನ ಕೈಗಳಲ್ಲಿ ಅಂಕುಶಪಾಶ, ಮೋದಕ, ಲೇಖನಿಯನ್ನು ಹಿಡಿದಿರುವುದು ಕಂಡುಬರುತ್ತದೆ. ಕಣಕಟ್ಟೆ ಹೋಬಳಿಯಲ್ಲಿ ಸೊಪ್ಪಿನ ಹಳ್ಳಿಯ ಬಸವೇಶ್ವರ ದೇವಾಲಯದ ದ್ವಾರಬಾಗಿಲಿನ ಲಲಾಟಬಿಂಬದಲ್ಲಿ ಗಣೇಶನ ಮೂರ್ತಿಯನ್ನು ದೇವಾಲಯದ ವಿರುದ್ಧ ದಿಕ್ಕಿನ ಕಲ್ಲಿನ ಮಂಟಪದ ಒಳಗೆ ನಂದಿಯ ಪಕ್ಕದಲ್ಲಿ ಇಡಲಾಗಿದ್ದು, ಈ ಮೂರ್ತಿಯು ಚತುರ್ಭುಜವನು ಹೊಂದಿದ್ದು, ಕೈಯಲ್ಲಿ ಮೋದಕ, ಲೇಖನಿಯನ್ನು

ಹಿಡಿದಿದ್ದಾನೆ. ಹೊಳಲ್ಕೆರೆಯ ರಾಮೇಶ್ವರ, ಮಾಡಾಳುವಿನ ಸ್ವರ್ಣಗೌರಿ, ಕಣಕಟ್ಟೆಯ ವೀರಭದ್ರೇಶ್ವರ ಮುಂತಾದ ದೇವಾಲಯಗಳಲ್ಲಿಯೂ ಇದೇ ರೀತಿಯ ಗಣೇಶನ ಶಿಲ್ಪಗಳು ಕಂಡುಬರುತ್ತದೆ.

**ವೀರಭದ್ರ ಶಿಲ್ಪ**

ಕಣಕಟ್ಟೆಯ ವೀರಭದ್ರೇಶ್ವರ ದೇವಾಲಯದಲ್ಲಿ ವೀರಭದ್ರನ ಮೂರ್ತಿ ಕಂಡುಬರುತ್ತದೆ. ವೈದಿಕ ಸಾಹಿತ್ಯ ಸ್ಕಂದ, ಶಿವ, ಮತ್ಸ್ಯ, ವಿಷ್ಣು, ವಾಯು, ಬ್ರಹ್ಮಾಂಡ, ಭಾಗವತ ಪುರಾಣಗಳಲ್ಲಿ ವೀರಭದ್ರನ ಉಲ್ಲೇಖ ಗೋಚರಿಸುತ್ತದೆ. ಕಣಕಟ್ಟೆಯ ವೀರಭದ್ರ ದೇವಾಲಯದಲ್ಲಿ ನಿಂತಿರುವ ಭಂಗಿಯ ವೀರಭದ್ರನ ವಿಗ್ರಹವಿದೆ. ಇದನ್ನು ಸುಮಾರು ಒಂದು ಅಡಿ ಪೀಠದ ಮೇಲೆ ನಿರ್ಮಿಸಲಾಗಿದೆ. ನಾಲ್ಕು ಕೈಗಳಲ್ಲಿ, ಒಂದು ಹಸ್ತದಲ್ಲಿ ಅಂಕುಶ, ಮತ್ತೊಂದರಲ್ಲಿ ಬಿಲ್ಲುಬಾಣ, ಮಗದೊಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈ ಹಸ್ತವನ್ನು ಕೆಳಭಾಗಕ್ಕೆ ಇಳಿಬಿಡಲಾಗಿದೆ. ವೀರಗಾಸೆಯನ್ನು ತೊಟ್ಟು, ಕಿರೀಟ, ಮುಕುಟ, ಕರ್ಣಕುಂಡಲ, ಯಜ್ಞೋಪವೀತ, ಭುಜವಳಯ, ಕಾಲಿಗೆ ದಪ್ಪನೆಯ ಕಡಗ, ಭುಜವಲ್ಯ, ದಪ್ಪನೆಯ ಕಡಗವನ್ನು ಧರಿಸಿರುವನು.

**೩.೨.೨. ವೈಷ್ಣವ ಶಿಲ್ಪಗಳು**

ವೈಷ್ಣವ ಪುರಾಣಗಳಲ್ಲಿ ವಿಷ್ಣುವಿನ ದಶಾವತಾರ ವರ್ಣನೆಯಿದೆ. ವಿಷ್ಣುವಿಗೆ ಹಲವಾರು ಹೆಸರುಗಳು ಇದೆ. ಕೇಶವ ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ನರಸಿಂಹ, ಹರಿ ಮತ್ತು ಕೃಷ್ಣ, ಅನಿರುದ್ಧ ಇನ್ನೂ ಮುಂತಾದವು. ವಿಷ್ಣುವನ್ನು ಚತುರ್ವಂಶಿ ಮೂರ್ತಿಗಳಿಂದಲೂ ಹಾಗೂ ಹತ್ತು ಅವತಾರಗಳಿಂದಲೂ ಪೂಜಿಸಲಾಗುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶಗಳಲ್ಲಿ ಕಂಡುಬರುವ ಶಿಲ್ಪಗಳನ್ನು ಕೆಳಕಂಡಂತೆ ಗಮನಿಸಬಹುದು.

**ಹನುಮಂತನ ಶಿಲ್ಪಗಳು**

ವೈಷ್ಣವ ಶಿಲ್ಪಗಳಲ್ಲಿ ಹನುಮಂತನ ಶಿಲ್ಪಗಳು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿವೆ. ಆಗಮಗಳಲ್ಲಿ ಹನುಮಂತನನ್ನು ರುದ್ರಾಂಶ ಸಂಭೂತನೆಂದೂ, ಸೂರ್ಯಪುತ್ರ ನೆಂದೂ, ವಾಯುಪುತ್ರನೆಂದೂ, ರಾಮನ ಭಕ್ತನೆಂದೂ, ಮುಖ್ಯಪ್ರಾಣನೆಂದೂ, ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಜಾನಪದರು ಹನುಮಂತ ದೇವಾಲಯಗಳ ನಿರ್ಮಾಣ ಮಾಡುವುದು ಪ್ರತಿಗ್ರಾಮದಲ್ಲಿ ಕಂಡುಬರುತ್ತದೆ. ಕಣಕಟ್ಟೆ ಹೋಬಳಿ ಪರಿಸರದಲ್ಲಿ ಹೆಚ್ಚು ಹೆಚ್ಚು ಆಂಜನೇಯನ ಶಿಲ್ಪಗಳು ಕಂಡುಬರುತ್ತವೆ. ದೊಡ್ಡ ಮೇಟಿಕುರ್ಕೆ, ಸೊಪ್ಪಿನಹಳ್ಳಿ, ಕಣಕಟ್ಟೆ ಮುಂತಾದ ಪ್ರದೇಶಗಳಲ್ಲಿ ಹನುಮಂತನ ಶಿಲ್ಪಗಳು ಕಂಡುಬರುತ್ತವೆ.

ದೊಡ್ಡ ಮೇಟಿಕುರ್ಕೆಯಲ್ಲಿನ ಆಂಜನೇಯನ ಮೂರ್ತಿಯು ಸುಂದರವಾಗಿದ್ದು, ಬಲಹಸ್ತವನ್ನು ಮೇಲೆತ್ತಿದ್ದಾನೆ. ಮತ್ತು ಎಡಹಸ್ತವನ್ನು ಸೊಂಟದ ಮೇಲೆ ಇರಿಸಿದ್ದಾನೆ. ಕೊರಳಲ್ಲಿ ಮಾಲೆಗಳನ್ನು ಮತ್ತು ಕೈಗಳಲ್ಲಿ ಪಟ್ಟಿಕೆಗಳನ್ನು ಧರಿಸಿದ್ದಾನೆ. ಶಿಲ್ಪದ ಹಿಂದೆ ದೊಡ್ಡದಾದ ಪ್ರಭಾವಳಿ ಇದ್ದು ಅದು ಹೂ ಬಳ್ಳಿಗಳ ಅಲಂಕಾರದಿಂದ ಸುಂದರವಾಗಿದೆ. ಸೊಪ್ಪಿನಹಳ್ಳಿಯಲ್ಲಿ ಇರುವ ಬಸವೇಸ್ವರ ದೇವಾಲಯದ ದ್ವಾರಬಾಗಿಲಿನ ಎರಡೂ ಕಡೆ ಆಂಜನೇಯನ ಎರಡು ಶಿಲ್ಪಗಳನ್ನು ಕೆತ್ತಲಾಗಿದೆ. ಈ ಮೂರ್ತಿಗಳು ನೇರ ಮುಖಮಾಡಿ ನಿಂತಿವೆ. ಮತ್ತು ಬಲಹಸ್ತವನ್ನು ಕೆಳಗೆ ಇಳಿಬಿಟ್ಟಿದೆ. ಎಡಹಸ್ತದಲ್ಲಿ ಗದೆಯನ್ನು ಮೇಲ್ಮುಖವಾಗಿ ಹಿಡಿಯಲಾಗಿದೆ. ಸೊಂಟಪಟ್ಟಿ, ಕಾಲ್ಕಡಗಗಳನ್ನು ಧರಿಸಿದ್ದಾರೆ.

**ನರಸಿಂಹ ವಿಗ್ರಹ**

ನರಸಿಂಹ ಮೂರ್ತಿಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಲಕ್ಷ್ಮೀನರಸಿಂಹ, ಕಂಬದ ನರಸಿಂಹ, ಕದರಿನರಸಿಂಹ, ಪ್ರಸನ್ನ ಲಕ್ಷ್ಮೀನರಸಿಂಹ ಮುಂತಾದವು. ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಕಿತ್ತನಕೆರೆಯಲ್ಲಿ ಲಕ್ಷ್ಮೀನರಸಿಂಹ ಮತ್ತು ದೊಡ್ಡ ಮೇಟಿಕುರ್ಕೆಯಲ್ಲಿ ಲಕ್ಷ್ಮೀನರಸಿಂಹ ದೇವಾಲಯಗಳು, ಮೂರ್ತಿಗಳು ಕಂಡುಬರುತ್ತವೆ. ಕಿತ್ತನ ಕೆರೆಯಲ್ಲಿರುವ ನರಸಿಂಹನ ಮೂರ್ತಿಯು ಶಿಥಿಲಾವಸ್ಥೆಯಲ್ಲಿದೆ. ನರಸಿಂಹನ ವಿಗ್ರಹವು ಆಸೀನ ರೂಪದಲ್ಲಿದ್ದು, ಚತುರ್ಭುಜನಾಗಿ ಕಂಡುಬರುತ್ತಾನೆ. ತೊಡೆಯ ಮೇಲೆ ಲಕ್ಷ್ಮಿಯನ್ನು ಕೂರಿಸಿಕೊಂಡಿದ್ದು, ಮತ್ತೊಂದು ಕಾಲನ್ನು ಕೆಳಗೆ ಇಳಿಬಿಟ್ಟಿದ್ದಾನೆ. ಶಿರದ ಮೇಲೆ ಕಿರೀಟವನ್ನು ಧರಿಸಿದ್ದಾನೆ. ಸುತ್ತಲೂ ಪ್ರಭಾವಳಿಯನ್ನು ಶಿಲೆಯಿಂದಲೇ ಮಾಡಲಾಗಿದೆ. ಮೂರ್ತಿಯು ಭಗ್ನಗೊಂಡಿರುವುದರಿಂದ ಕೈಗಳಲ್ಲಿರುವ ವಸ್ತುಗಳು ಗೋಚರಿಸುವುದಿಲ್ಲ. ಬಲಗಾಲಿನಲ್ಲಿ ದೊಡ್ಡದಾದ ಕಡಗವನ್ನು ತೊಟ್ಟಿದ್ದು, ಅನೇಕ ರೀತಿಯ ಆಭರಣಗಳನ್ನು ನರಸಿಂಹನು ಮತ್ತು ಲಕ್ಷ್ಮೀಯು ಧರಿಸಿದ್ದಾರೆ. ಇಲ್ಲಿ ಲಕ್ಷ್ಮೀಯು ಕಿರೀಟಧಾರಣೆ ಯಾಗಿದ್ದಾಳೆ. ದೊಡ್ಡಮೇಟಿ ಕುರ್ಕೆಯಲ್ಲಿನ ದೇವಾಲಯದಲ್ಲಿಯೂ ಈ ರೀತಿಯಲ್ಲಿಯೇ ಇದ್ದು, ತೊಡೆಯ ಮೇಲೆ ಲಕ್ಷ್ಮೀಯನ್ನು ಕೂರಿಸಿಕೊಂಡಿದ್ದಾನೆ. ಇಲ್ಲಿ ಮೂರ್ತಿಯನ್ನು ಬೆಳ್ಳಿಯಿಂದ ತಯಾರಿಸಲಾಗಿದೆ. ಶಿರದ ಮೇಲೆ ದೊಡ್ಡದಾದ ವೃತ್ತಾಕಾರವಾದ ಕಿರೀಟವಿದೆ.

**೩.೨.೩. ಶಾಕ್ತ ಶಿಲ್ಪಗಳು**

ಶಕ್ತಿ ದೇವತೆಗಳ ಆರಾಧನೆಯು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಇದರ ಪ್ರಾಚೀನತೆಯನ್ನು ಹರಪ್ಪ ಮೆಹೆಂಜೊದಾರೋ ನಾಗರೀಕತೆಯಿಂದಲೇ ಗುರುತಿಸಬಹುದು. ಸಪ್ತಶತಿ ಅಥವಾ ಚಂಡಿ ಎಂಬ ಮಾರ್ಕಂಡೇಯ ಪುರಾಣದ ೨೦೦ ಶ್ಲೋಕಗಳು ಮಹಾಮಾತೆಯ

ಅವತಾರವನ್ನು ಪ್ರಸ್ತಾಪಿಸಿವೆ. ಶ್ರೀವಿದ್ಯಾವರ್ಣವ ತಂತ್ರದಲ್ಲಿ ೮೫ ದೇವತಾ ಶಿಲ್ಪಗಳ ಪ್ರತಿಮಾ ಲಕ್ಷಣಗಳಿವೆ. ಸಮಸ್ತ ಸೃಷ್ಟಿಗೆ ಮೂಲ ಕಾರಣ ಕರ್ತೃ ಶಕ್ತಿದೇವತೆ, ಶಕ್ತಿ ದೇವತೆಯು ವಿವಿಧ ಅವತಾರಗಳಾದ ಚಂಡಿ, ಕಾಳಿ, ದುರ್ಗಿ, ಊರಮ್ಮ, ಲಕ್ಷ್ಮೀ, ಮಹಿಷಾಸುರ ಮರ್ದಿನಿ ಹೀಗೆ ನಾನಾ ಹೆಸರುಗಳಿಂದ ಪ್ರಖ್ಯಾತಿ ಪಡೆದಿದ್ದಾಳೆ. ಈ ಪಂಥ ಎಲ್ಲಾ ಕಾಲದಲ್ಲಿಯೂ ಜನ ಸಾಮಾನ್ಯರಲ್ಲಿ ಬೇರುಬಿಟ್ಟಿರುವ ಪಂಥವಾಗಿದೆ.

**ಸಪ್ತಮಾತೃಕೆಯರ ಶಿಲ್ಪ**

ವೈದಿಕ ಸಾಹಿತ್ಯದಲ್ಲಿ ಕಂಡುಬರುವ ಪುರುಷ ದೇವರುಗಳಿಗೆ ಸ್ತ್ರೀ ದೇವತೆಗಳನ್ನು ಶಕ್ತಿ ದೇವತೆಗಳೆಂದು ನಿರೂಪಿಸಿ ಅಳವಡಿಸಿದರು. ಶಿವನಿಗೆ ಶಿವೆ(ಶಕ್ತಿ), ವಿಷ್ಣುವಿಗೆ ಲಕ್ಷ್ಮಿ, ಬ್ರಹ್ಮನಿಗೆ ಸರಸ್ವತಿ, ಗಣಪತಿಗೆ ಪುಷ್ಠಿ, ಅನಂತನಿಗೆ ಕುಷ್ಠಿ, ಕಾಲನಿಗೆ ರಾತ್ರಿ, ಸೂರ್ಯನಿಗೆ ಸಂಜ್ಞೆ, ಇಂದ್ರನಿಗೆ ಸಚಿ, ಅಗ್ನಿಗೆ ಸ್ವಾಹಾ, ದಕ್ಷನಿಗೆ ರುಕ್ಷಿಣಿ, ಸ್ಕಂದನಿಗೆ ದೇವಸೇನ ಹಾಗೂ ಇನ್ನಿತರರು. ಈ ಸಪ್ತಮಾತೃಕೆಯರನ್ನು ಶಿಲ್ಪದಲ್ಲಿ ಒಂದೇ ಫಲಕದಲ್ಲಿ ಸಾಲಾಗಿ ಅಥವಾ ಬೇರೆ ಬೇರೆ ಬಿಡಿಶಿಲ್ಪಗಳಲ್ಲಿಯೂ ತೋರಿಸಿರುವುದು ಸಪ್ತಮಾತೃಕೆಯರನ್ನು ಒಂದೇ ಘಟಕದಲ್ಲಿ ತೋರಿಸಿದ್ದರೆ, ಸಾಮಾನ್ಯವಾಗಿ ಅವರ ಕ್ರಮ, ಬ್ರಾಹ್ಮೀ, ಮಹೇಶ್ವರ, ಕೌಮಾರಿ ಅಥವಾ ಕಾರ್ತಿಕೇಯ, ವೈಷ್ಣವಿ, ಮಾಹಿ, ಇಂದ್ರಾಣಿ, ಚಾಮುಂಡಿ, ಬ್ರಾಹ್ಮೀಯ ಬಲಭಾಗದಲ್ಲಿ ವೀರಭದ್ರನನ್ನು ಚಾಮುಂಡಿಯ ಎಡಭಾಗದಲ್ಲಿ ಗಣೇಶನನ್ನು ಪ್ರತಿಷ್ಠಾಪಿಸಿರುತ್ತಾರೆ.

ಪ್ರಸ್ತುತ ಅಧ್ಯಯನ ಪ್ರದೇಶದ ಜನ್ನಾವರದ ಸೋಮೇಶ್ವರ ದೇವಾಲಯದ ನವರಂಗದಲ್ಲಿ ಸಪ್ತಮಾತೃಕೆಯರ ಶಿಲ್ಪಗಳು ಕಂಡುಬಂದಿದೆ. ಈ ಶಿಲ್ಪವು ಒಂದೇ ಪಟ್ಟಿಕೆಯಲ್ಲಿ ಸಪ್ತಮಾತೃಕೆಯರನ್ನು ತೋರಿಸುತ್ತದೆ. ಇವರು ಸತ್ಯ ಲಲಿತಾಸನದಲ್ಲಿ ಪೀಠದ ಮೇಲೆ ಕುಳಿತಿರುವರು. ಚತುರ್ಭುಜ ಧಾರಿಗಳಾದ ಇವರು ವಸ್ತ್ರಧಾರಿಗಳಾಗಿದ್ದು, ವಿವಿಧ ಆಭರಣಗಳಿಂದ ಅಲಂಕೃತಗೊಂಡಿರುವರು.

**ಮಹಿಷಾಸುರಮರ್ಧಿನಿ**

ಕಣಕಟ್ಟೆ ಹೋಬಳಿಯ ಹೊಳಲ್ಕೆರೆಯ ರಾಮೇಶ್ವರ ದೇವಾಲಯದ ಅಂತರಾಳದ ಪಕ್ಕದ ಕೋಣೆಯಲ್ಲಿ ಮಹಿಷಾಸುರಮರ್ದಿನಿಯ ಶಿಲ್ಪವಿದೆ. ದೇವಿಯು ಅಷ್ಟಭುಜಗಳನ್ನು ಹೊಂದಿದ್ದಾಳೆ. ಬಲಗಡೆಯ ಹಸ್ತಗಳಲ್ಲಿ ಒಂದು ಹಸ್ತದಲ್ಲಿ ಚಕ್ರ, ಮತ್ತೊಂದರಲ್ಲಿ ಬಾಣ ಮಗದೊಂದರಲ್ಲಿ ಸಣ್ಣ ಕತ್ತಿಯನ್ನು ಹಿಡಿದಿದ್ದು, ಇನ್ನೊಂದು ಹಸ್ತವನ್ನು ಅಭಯಹಸ್ತವನ್ನಾಗಿ ಹಿಡಿದಿದ್ದಾಳೆ. ಎಡಭಾಗದಲ್ಲಿ ಒಂದು ಹಸ್ತದಲ್ಲಿ ಶಂಖ, ಮತ್ತೊಂದರಲ್ಲಿ ಬಿಲ್ಲು, ಇನ್ನೊಂದರಲ್ಲಿ ಗುರಾಣಿಯನ್ನು ಹಿಡಿದಿದ್ದಾಳೆ. ದೇವಿಯು ಸ್ಥಾನಿಕ ರೂಪದಲ್ಲಿ ತನ್ನ ವಾಹನವಾದ ಸಿಂಹವನ್ನು ಹೊಂದಿದ್ದಾಳೆ. ಎಡಭಾಗದ

ಕೆಳಭಾಗದಲ್ಲಿ ಕೋಣನ ಶಿಲ್ಪವಿದ್ದು, ಅದರ ಕುತ್ತಿಗೆಯಿಂದ ಅಸುರನ ಆಕೃತಿಯು ಹೊರಬಂದಿದೆ. ದೇವಿಯು ತನ್ನ ಎಡಹಸ್ತದಿಂದ ಈ ಅಸುರನ ಕೈಯನ್ನು ಹಿಡಿದಿದ್ದಾಳೆ. ದೇವಿಯ ಮುಖವು ಉಗ್ರರೂಪವನ್ನು ಹೊಂದಿದೆ. ಶಿಲ್ಪವು ಸುತ್ತಲೂ ಪ್ರಭಾವಳಿಯನ್ನು ಹೊಂದಿದೆ.

**೩.೩. ಶಾಸನಗಳು**

ಶುದ್ಧ ಐತಿಹಾಸಿಕ ಸಾಹಿತ್ಯದ ಕೊರತೆಯಿರುವುದರಿಂದ ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಇತಿಹಾಸದ ಪುನಾರಚನೆಗೆ ವಿವಿಧ ಆಕರ ಸಾಮಾಗ್ರಿಗಳನ್ನು ಬಳಸುವ ಅವಶ್ಯಕತೆ ಇರುವುದು ಸರ್ವವಿದಿತ. ಇಂತಹ ಆಕರಗಳಲ್ಲಿ ಶಾಸನಗಳಿಗೆ ಪ್ರಮುಖ ಸ್ಥಾನವಿದೆ. ಶಾಸನಗಳು ಕಲ್ಲು, ಲೋಹ, ಕಟ್ಟಿಗೆ, ಇಟ್ಟಿಗೆ, ಶಂಖ ಮುಂತಾದ ವಿವಿಧ ಸಾಮಗ್ರಿಗಳ ಮೇಲೆ ಲಿಖಿತವಾಗಿರುತ್ತವೆ. ರಾಜಕೀಯ ಆಗುಹೋಗುಗಳನ್ನು ದಾಖಲಿಸುವುದೇ ಶಾಸನಗಳ ಮುಖ್ಯ ಉದ್ದೇಶವಾಗಿರುವುದಿಲ್ಲ. ಕೆಲವು ಅಪವಾದಗಳನ್ನು ಹೊರತುಪಡಿಸಿದರೆ ಧಾರ್ಮಿಕ ದಾನದತ್ತಿಗಳನ್ನು ದಾಖಲಿಸುವ ಶಾಸನಗಳೇ ಹೆಚ್ಚು. ಆದರೆ, ಆ ನೆಪದಲ್ಲಿ ಅವು ಅಂದಂದಿನ ಐತಿಹಾಸಿಕ ಸ್ಥಿತಿಗತಿಗಳ ಮೇಲೆ ಚೆಲ್ಲುವ ಬೆಳಕು ಅಪಾರ. ಇತಿಹಾಸವೆಂಬುದು ಕೇವಲ ರಾಜಕೀಯ ಆಗುಹೋಗುಗಳ ನಿರೂಪಣೆಯಲ್ಲ. ಅದು ಇತಿಹಾಸದ ಒಂದಂಶವಷ್ಟೇ. ಬದಲಾಗುತ್ತಿರುವ ಸಮಾಜ, ಆರ್ಥಿಕ ವ್ಯವಸ್ಥೆ, ಸಾಹಿತ್ಯದ ಸ್ವರೂಪ, ಧರ್ಮಪಂಥಗಳ ಬೆಳವಣಿಗೆ, ವಾಸ್ತುಶಿಲ್ಪ ಕಲೆಗಳ ವಿಕಾಸ ಮುಂತಾದ ಹಲವು ವಿಷಯಗಳು ಇತಿಹಾಸದ ಗರ್ಭದಲ್ಲಿರುತ್ತದೆ. ಭಾರತೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ಬಹುಶಃ ಶಾಸನ ಆಕರಗಳಿಂದ ಒದಗುವ ಐತಿಹಾಸಿಕ ಸಾಮಗ್ರಿಯ ಹರವು ಇನ್ನಾವ ಆಕರದಿಂದಲೂ ಲಭ್ಯವಾಗದು.

ಪ್ರಸಿದ್ಧ ಶಾಸನತಜ್ಞ ಡಿ.ಸಿ.ಸರ್ಕಾರ್ ಅವರು ಒಂದೆಡೆ ಹೇಳಿರುವಂತೆ ಭಾರತದ ಪ್ರಾಚೀನ ಮತ್ತು ಮಧ್ಯಕಾಲೀನ ಇತಿಹಾಸದ ನಮ್ಮ ೮೦ ಪ್ರತಿಶತ ಜ್ಞಾನ ಶಾಸನ ಆಕರಗಳನ್ನೇ ಅವಲಂಬಿಸಿದೆ. ರಾಜಕೀಯ ಇತಿಹಾಸವಷ್ಟೇ ಅಲ್ಲದೇ, ಕಲೆ, ಸಾಹಿತ್ಯ, ಧರ್ಮ, ಭಾಷೆ ಮುಂತಾದ ಸಾಂಸ್ಕೃತಿಕ ಅಂಶಗಳ ಕುರಿತು ಭೌಗೋಳಿಕ ಮತ್ತು ಕಾಲಮಾನದ ಚೌಕಟ್ಟಿನಲ್ಲಿ ಇತಿಹಾಸವನ್ನು ರಚಿಸುವ ನಿಟ್ಟಿನಲ್ಲಿ ಶಾಸನಗಳ ಪಾತ್ರ ಹಿರಿದಾದುದು.[೩೫]

ಯಾವುದೇ ಒಂದು ಸ್ಥಳೀಯ ಪ್ರದೇಶದ ಪಾರಂಪರಿಕ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಶಾಸನಗಳು ಪ್ರಮುಖ ಪಾತ್ರವಹಿಸುತ್ತವೆ. ಶಾಸನಗಳ ಕ್ರಮಬದ್ಧವಾದ ಅಧ್ಯಯನ ಶಾಖೆಗೆ ಶಾಸನಶಾಸ್ತ್ರ ಎಂದು ಕರೆಯಲಾಗಿದೆ. ಶಾಸನ ಎಂಬ ಸಂಸ್ಕೃತ ಪದಕ್ಕೆ 'ಆಜ್ಞೆ'(ರಾಜಾಜ್ಞೆ) ಎಂಬುದು ಮೂಲಾರ್ಥ. ಶಾಸ್ ಎಂಬ ಧಾತುವಿನಿಂದ ಬಂದದ್ದು 'ಶಾಸನ'. 'ಶಾಸ್'

ಧಾತುವಿಗೆ ಆಜ್ಞಾಪಿಸು, ಶಿಕ್ಷಿಸು, ನಿಯಂತ್ರಿಸು ಎಂಬ ಅರ್ಥಗಳಿವೆ. ಶಾಸನ ಎಂಬುದು ಮೂಲತಃ ದಾನ ಸಂಬಂಧವಾದ ರಾಜಾಜ್ಞೆಯಾಗಿತ್ತು. ಈ ಅರ್ಥದಲ್ಲಿ ಶಾಸನಗಳೆಂದರೆ ದಾನ ಶಾಸನಗಳೇ. ಶಾಸನ ಎಂಬ ಪದವು Inscripiton ಎಂಬ ಆಂಗ್ಲಶಬ್ದದ ಸಮಾನಾರ್ಥಕವಾಗಿ ಬಳಕೆಯಾಗುತ್ತದೆ. Epigraph ಎಂಬ ಪದ ಪ್ರಯೋಗವೂ ಉಂಟು. ಜೆ.ಎಫ್.ಫ್ಲೀಟ್ ಅವರು ಹೇಳುವಂತೆ "ಶಾಸನಗಳು ಬಹು ಸಂದರ್ಭಗಳಲ್ಲಿ ಅಧಿಕೃತ ಲಕ್ಷಣವುಳ್ಳ, ಸಧಾರಣವಾಗಿ ಸಂಕೀರ್ಣವಾದ ಸಂಗತಿಗಳನ್ನು ಸಾರುವ, ದಿನಾಂಕವಿರುವ ಅಥವಾ ಇಲ್ಲದಿರುವ ಮತ್ತು ತಾವು ಪ್ರಸ್ತಾಪಿಸುವ ವಿಷಯಗಳ ಬಗ್ಗೆ ಶಾಶ್ವತವಾದ ದಾಖಲೆಗಳಾಬೇಕೆಂದು ಉದ್ದಿಷ್ಟವಾದ ಪ್ರಕಟಣೆಗಳು."[೩೬]

ಶಾಸನಗಳು ರಾಜರ ಆಜ್ಞೆಗಳನ್ನು ತಿಳಿಸುವ ಬರಹಗಳನ್ನು ಸೂಚಿಸುತ್ತವೆ ಎಂದು ಕೌಟಿಲ್ಯನು ಹೇಳಿದ್ದಾನೆ. ಮೂಲತಃ ರಾಜಾಜ್ಞೆಗಳು ಅಥವಾ ಶಾಸನಗಳು ತಾಳಪತ್ರದ ಮೇಲಿರುತ್ತಿದ್ದುವೆಂದು ತಿಳಿದುಬರುತ್ತದೆ. ಅವುಗಳನ್ನು ಶಾಶ್ವತಗೊಳಿಸುವುದಕ್ಕಾಗಿ ತಾಮ್ರಪಟಗಳ ಮೇಲೂ, ಕಲ್ಲಿನ ಮೇಲೂ ಕೊರೆದರು. ರಾಜಾಜ್ಞೆ ಎಂಬ ಮೂಲಾರ್ಥ ಕ್ರಮೇಣ ವಿಸ್ತೃತವಾಗಿದ್ದನ್ನು ಕಾಣುತ್ತೇವೆ. ದಾನ ಶಾಸನಗಳ ಸಂಖ್ಯೆ ಹೆಚ್ಚಾಯಿತು. ದೇವಾಲಯಗಳಿಗೆ, ಮಠಮಾನ್ಯಗಳಿಗೆ, ಅಗ್ರಹಾರಗಳಿಗೆ, ಬ್ರಾಹ್ಮಣರು ಪುರೋಹಿತರಿಗೆ ದಾನಗಳನ್ನು ನೀಡುವುದು ಹೆಚ್ಚಾಯಿತು. ಮುಂದೆ ಅದರಲ್ಲಿ ರಾಜನಿಂದ ಪಡೆದ ದಾನ ಧರ್ಮದ ವಿಷಯವನ್ನು ದಾನ ಪಡೆದಿರುವ ವ್ಯಕ್ತಿ ತಮ್ಮ ಜಮೀನಿನ ಹೊಲದ ಬದುಗಳಲ್ಲಿ ಕಲ್ಲಿನಲ್ಲಿ ಕೆತ್ತಿಸಿ ನೆಡುತ್ತಿದ್ದರು. ಪ್ರತಿಯೊಂದು ಶಾಸನವು ಧರ್ಮಸ್ತೋತ್ರಗಳಿಂದಲೇ ಪ್ರಾರಂಭಗೊಳ್ಳುತ್ತವೆ. ಶಾಸನಗಳಲ್ಲಿ ಸೂರ್ಯ, ಚಂದ್ರರ ಚಿತ್ರಗಳು ಕಂಡುಬರುತ್ತದೆ. ಅಂದರೆ ಕೊಟ್ಟಿರುವ ದಾನವು ಸೂರ್ಯ, ಚಂದ್ರರು ಇರುವ ತನಕ ಇರಲಿ ಎಂಬ ಉದ್ದೇಶವಾಗಿತ್ತು. ಶಾಸನಗಳಲ್ಲಿ ಶಿಲಾಶಾಸನಗಳು, ತಾಮ್ರಶಾಸನಗಳು, ಸ್ತಂಭಶಾಸನಗಳು, ಗುಹಾಶಾಸನಗಳು, ದಾನಶಾಸನಗಳು, ಜೊತೆಗೆ ವೀರಗಲ್ಲುಗಳು, ಮಹಾಸತಿ ಗಲ್ಲುಗಳು, ವೀರಮಾಸ್ತಿಗಲ್ಲುಗಳು, ನಿಷಧಿ ಕಲ್ಲುಗಳನ್ನು ಕಾಣಬಹುದು.[೩೭]

ಕಾಲಾನಂತರದಲ್ಲಿ ಶಾಸನಗಳ ಮಹತ್ವ ಹೆಚ್ಚಿದಂತೆ ಧರ್ಮದ ಲೇಪನ ಮಾಡಲಾಯಿತು. ಅಶೋಕನು ತಾನು ಹಾಕಿಸಿದ ಶಾಸನಗಳನ್ನು ಧರ್ಮಶಾಸನ(ಲಿಪಿ)ಗಳೆಂದು ಕರೆದುಕೊಂಡಿದ್ದಾನೆ. Inscribe ಎಂಬುದರಿಂದ ಬಂದ ಕೆತ್ತನೆ, ಕೊರೆ, ಕಂಡರಿಸುಎಂಬ ಅರ್ಥಕ್ಕೆ ಬದಲಾಗಿ ಆಡಳಿತ, ಪ್ರಭುತ್ವ, ಆಜ್ಞೆ, ಅಪ್ಪಣೆ, ಕಾನೂನು ಕಟ್ಟಳೆ, ವಿಧಿನಿಗ್ರಹ, ಹಿಡಿತ, ಶಿಕ್ಷೆ, ದಂಡನೆ, ಶಾಸ್ತಿ, ಒಪ್ಪಂದ, ಕರಾರು ಎಂಬ ವ್ಯಾಪಕ ಅರ್ಥವನ್ನು ಶಾಸನ ಪಡೆದುಕೊಂಡಿತು.[೩೮]

ಕರ್ನಾಟಕದಲ್ಲಿ ಮೌರ್ಯರ ಕಾಲದಿಂದ ಹಿಡಿದೂ ಪಾಳೆಗಾರರ ನಂತರದ ಕಾಲದವರೆಗೂ ಶಾಸನಗಳು ಲಭ್ಯವಾಗಿದ್ದು, ಆಯಾ ಕಾಲದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ

ಸಾಮಾಜಿಕ, ಧಾರ್ಮಿಕ, ಆರ್ಥಿಕ, ದೇವಾಲಯಗಳ ನಿರ್ಮಾಣ, ವಾಸ್ತುಶಿಲ್ಪ, ಕೆರೆಗಳ ನಿರ್ಮಾಣ ಮುಂತಾದ ವಿಚಾರಗಳನ್ನು ತಿಳಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಈ ಎಲ್ಲಾ ಅಂಶಗಳಿಂದ ಒಂದು ಪ್ರದೇಶದ ಸಂಸ್ಕೃತಿಯ ಪುನರ್ ರಚನೆಗೆ ಶಾಸನಗಳೂ ಮುಖ್ಯ ಆಕರಗಳಾಗಿದ್ದು, ಇದರಲ್ಲಿ ಶಿಲಾಶಾಸನಗಳು, ವೀರಗಲ್ಲುಗಳು, ಮಹಾಸತಿ ಕಲ್ಲುಗಳು, ಮುಂತಾದವುಗಳನ್ನು ಕಾಣಬಹುದಾಗಿದೆ.

## ೩.೪. ಇತರೆ ಅವಶೇಷಗ:ಳು

ಕಣಕಟ್ಟೆ ಹೋಬಳಿ ಪರಿಸರದಲ್ಲಿ ಕಂಡುಬರುವ ಶಿಲಾಶಾಸನಗಳು ಈ ಹೋಬಳಿ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳ ಸಾಂಸ್ಕೃತಿಕ ಪರಂಪರೆಯನ್ನು ಬಿಂಬಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

**ಕಣಕಟ್ಟೆ ಗ್ರಾಮದ ಉತ್ತರಕ್ಕೆ ಪಾಳುದೇವಸ್ಥಾನದ ಬಳಿ ಇರುವ ಶಿಲಾಶಾಸನ.**

ಕಣಕಟ್ಟೆ ಹೋಬಳಿ ಪರಿಸರದ ರಾಜಕೀಯ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟುವಲ್ಲಿ ಈ ಶಾಸನವು ಮಹತ್ವಪೂರ್ಣ ಪಾತ್ರವಹಿಸಿದೆ. ಈ ಶಾಸನ ಹೊಯ್ಸಳರ ಕಾಲಕ್ಕೆ ಸಂಬಂಧಿಸಿದ ಶಾಸನವಾಗಿದೆ. ಹೊಯ್ಸಳರ ಶಾಸನಗಳು ಕ್ರಿ.ಶ.೧೧ ರಿಂದ ೧೩ನೇ ಶತಮಾನಗಳ ಸಾಮಾಜಿಕ ಜೀವನ ಮತ್ತು ಸಂಸ್ಕೃತಿಯನ್ನು ಅರಿಯಲು ವಿಶೇಷವಾಗಿ ಸಹಾಯ ಮಾಡಿದೆ. ಕಣಕಟ್ಟೆ ಪ್ರದೇಶದಲ್ಲಿ ಪಾಳುಬಿದ್ದ ಕಲಿಗೇಶ್ವರ ದೇವಾಲಯದಲ್ಲಿನ ಮಂಟಪದಲ್ಲಿ ಸುಮಾರು ೪ ಅಡಿ ಎತ್ತರದ ಶಿಲೆಯಲ್ಲಿ ಈ ಶಾಸನವನ್ನು ಬರೆಯಲಾಗಿದೆ. ಈ ಶಾಸನವು 'ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ' ಎಂಬ ಮಂಗಳ ಶ್ಲೋಕದೊಂದಿಗೆ ಆರಂಭಗೊಂಡಿದೆ.

ಹೊಯ್ಸಳರ ಪ್ರಸಿದ್ಧ ದೊರೆಯಾದ ವಿಷ್ಣುವರ್ಧನನ ರಾಜಧಾನಿಯಾದ ದ್ವಾರಸಮುದ್ರದ ನೆಲೆವೀಡಿನಲ್ಲಿ ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಗಂಗವಾಡಿ ೯೬,೦೦೦ದ ನಾಡಿನಲ್ಲಿ ಕಣಕಟ್ಟೆಯು ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿತ್ತು ಎಂದು ಈ ಶಾಸನ ಉಲ್ಲೇಖಿಸುತ್ತದೆ. ಅಲ್ಲದೇ ಇಲ್ಲಿ ಅನೇಕ ವ್ಯಾಪಾರೀ ಸಂಘಗಳು ಚಟುವಟಿಕೆಯಿಂದಿದ್ದವು. ಇಲ್ಲಿ ತೆಲ್ಲಿಗರ ಸಂಘದ ಎಂಟು ಪ್ರಮುಖ ತೈಲಿಗರು ಕಲಿಗೇಶ್ವರ ದೇವರಿಗೆ ನಂದಾದೀವಿಗೆಗೆ ತಮ್ಮ ತೈಲದ ಕೊಡಗಳಿಗೆ ಸೊಂಟಗೆ ಒಂದರಂತೆ ದಾನಬಿಟ್ಟಿದ್ದಾರೆ. ಅಲ್ಲದೆ ದೇವಾಲಯದ ಕೆಲಸಕ್ಕೆ ವರುಷಕ್ಕೆ ಒಂದು ಗಾಣದಲ್ಲಿ ಒಂದು ಹಣದಂತೆ ದೇವರಿಗೆ ದಾನ ಬಿಟ್ಟಿದ್ದಾರೆ. ಈ ಶಾಸನವು ವಿಷ್ಣುವರ್ಧನನನ್ನು ಮಹಾಮಂಡಳೇಶ್ವರ, ದ್ವಾರಾವತೀಪುರವರಾಧೀಶ್ವರ, ಯಾದವಕುಳಾಂಬರದ್ಯುಮಣಿ ಸಮ್ಯುಕ್ತ

ಚೂಡಾಮಣಿ, ಶ್ರೀಮತ್ರಿಭುವನಮಲ್ಲ, ತಳಕಾಡುಗೊಂಡ ಭುಜಬಳವೀರ ಗಂಗ, ಎಂದೆಲ್ಲಾ ವರ್ಣಿಸಿದೆ. ಈತನ ಕಾಲದಲ್ಲಿ ಮಹಾಪ್ರಧಾನಿ, ಸರ್ವಾಧ್ಯಕ್ಷ ಹಾಗೂ ದುಷ್ಟರನ್ನು ಶಿಕ್ಷಿಸುತ್ತಾ, ಶಿಷ್ಟರನ್ನು ರಕ್ಷಿಸುತ್ತಾ, ಸುಖ, ಸಂತೋಷದಿಂದ ಕೂಡಿದ್ದ ಮಹಾ ಪ್ರಧಾನಿ ಎನಿಸಿದ ಶ್ರೀ ನರಸಿಂಹನ ಉಪಸ್ಥಿತಿಯಲ್ಲಿ ಆಳುತ್ತಿದ್ದನು. ಕಣಕಟ್ಟೆಯ ಮಗರೆನಾಡು ಮುನ್ನೂರನ್ನು ಸಾಮಂತ ಗೋಯಿದೇವ ಆಳುತ್ತಿದ್ದನು.

ಶಕವರ್ಷ ೧೧೬೬ನೇಯ ರುಧಿರೋದ್ಗಾರಿ ಸಂವತ್ಸರದ ವೈಶಾಖ ಶುದ್ದ ಸಪ್ತಮಿ ಬ್ರಿಹವಾಹ ಪುಷ್ಯ ನಕ್ಷತ್ರದಂಧು ಶಿವಾಗಮಾಭ್ಯಾಸಿಗಳು, ಲೋಕಚಾರ್ಯರು ಆಳ್ವಿಭಟ್ಟರು ಈ ಕಲಿಗೇಶ್ವರ ದೇವರ ಪ್ರತಿಷ್ಠೆಯಂ ಮಾಡಿಸಿದಾಗ ಸಾಮಂತ ಗೋಯಿದೇವನು ಅಂಗಭೋಗ ನೈವೇದ್ಯ, ಬ್ರಾಹ್ಮಣರ ಆಹಾರಧಾನ್ಯಕ್ಕಾಗಿ ಆಳ್ವಿಭಟ್ಟರಿಗೆ ಬಿಟ್ಟ ದತ್ತಿ. ಹಿರಿಯ ಕೆರೆಯ ಹಿಂಬದಿಯಲ್ಲಿನ ಬೆದ್ದಲು, ಕಳಿಕಟ್ಟೆಯ ಹೊಯ್ಸಳ ಗೌಡನ ಮೊಮ್ಮಗ ಸಾತಯನಾಯಕ ಬಿಟ್ಟ ಗದ್ದೆ ಮುಂತಾದವುಗಳನ್ನು ದಾನಬಿಟ್ಟ ವಿಚಾರವನ್ನು ಈ ಶಾಸನ[೬೯] ಪ್ರಸ್ತಾಪಿಸುತ್ತದೆ.

**ನಾಗವೇದಿ ಸೋಮೇಶ್ವರ ದೇವಸ್ಥಾನದ ದಕ್ಷಿಣದ ಕಡೆ ನಿಲ್ಲಿಸಿರುವ ಶಿಲಾಶಾಸನ**

ಈ ಶಾಸನವು ಹೊಯ್ಸಳ ವೀರಬಲ್ಲಾಳ ಮತ್ತು ನರಸಿಂಹನ ಕಾಲಾವಧಿಯದಾಗಿದ್ದು, ಶ್ರೀ ಮಹಾದೇವ ಬೊಮ್ಮೇಶ್ವರ ದೇವರ ಸ್ಥಾನದ ಭೂಮಿಯು ಸ್ಥಾನಿಕರಾದ ಭೈರಜೀಯ, ನಾಗಜೀಯ ದೇವೇಂದ್ರಜೀಯ ಈ ಮೂವರಲ್ಲಿ ಹಂಚಿಕೆಯಾಗಿದೆ. ದೇವೇಂದ್ರ ಜೀಯನ ಒಂದು ಭಾಗವನ್ನು ಆತನ ಮೊಮ್ಮಗ ದೇವಜೀವ ಮತ್ತು ಹಲಕೂರ ಚಿಕ್ಕ ಜೀಯನು ಹಂಚಿಕೊಂಡು, ಅದನ್ನು ತನ್ನ ತಂಗಿ ಸಾಂತವ್ವೆಗೆ, ಅಳಿಯನಾದ ಅವಳ ಮಗನಿಗೆ ತನ್ನ ಭಾಗದ ಗದ್ದೆ ಬೆದ್ದಲು, ಕಳ, ಮನೆ, ಅಷ್ಟಭೋಗ, ಭಾಗ್ಯ ಸಾಮ್ಯವನ್ನು ಧಾರಾಪೂರ್ವಕವಾಗಿ ದತ್ತಿ ಕೊಟ್ಟಿದ್ದಾನೆ.[೭೦]

**ಜಯಚಾಮರಾಜಪುರ(ಹಲಕೂರು)ಗ್ರಾಮದ ಉತ್ತರದಲ್ಲಿರುವ ಪಾಳು ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಾಸನ**

ಕಣಕಟ್ಟೆ ಹೋಬಳಿಯ ಒಂದು ಪ್ರಮುಖ ಗ್ರಾಮವಾಗಿರುವ ಹಲುಕೂರಿನ ಈ ದೇವಾಲಯವು ಸಂಪೂರ್ಣವಾಗಿ ನಾಶವಾಗಿದೆ. ಆದರೆ ಆ ದೇವಾಲಯದ ಹತ್ತಿರ ಇರುವ ಶಾಸನಗಳು ಈ ಗ್ರಾಮದ ಪೂರ್ವದ ಇತಿಹಾಸವನ್ನು ತಿಳಿಸಲು ಅನುವಾಗಿರುವಂತೆ ಬಿದ್ದಿವೆ. ಈ ಶಿಲಾಶಾಸನವು ಹೊಯ್ಸಳರ ಕಾಲದ್ದಾಗಿದ್ದು, ೨ನೇ ಬಲ್ಲಾಳನ ಕಾಲಾವಧಿಯದಾಗಿದ್ದು, ಒಂದು ದಾನಶಾಸನವಾಗಿದೆ. ನರಸಿಂಹಗೌಡನು ಹಲಕೂರಿನ ಮಹಾಪ್ರಭುವಾಗಿದ್ದನು. ಇಲ್ಲಿನ ಎಲ್ಲ ಪ್ರಜೆಗಳು, ಜೊತೆಗೆ

ಮುದ್ದೆಗೌಡ, ದಾಸಗೌಡ ಮತ್ತು ಚಿಕ್ಕಗೌಡರು ಇಲ್ಲಿನ ಕಲಿದೇವರಿಗೆ ಭೂಮಿಯನ್ನು ದಾನವಾಗಿ ನೀಡುತ್ತಾರೆ. ಇದು ದೇವಾಲಯದ ಸೇವೆಗಾಗಿ, ಜೀರ್ಣೋದ್ಧಾರಕ್ಕಾಗಿ ಮತ್ತು ಕಲಿದೇವರ ನೈವೇದ್ಯ, ನಂದಾದೀವಿಗೆ, ಅಂಗಭೋಗ, ರಂಗಭೋಗಕ್ಕಾಗಿ ದತ್ತಿಯನ್ನು ನೀಡುತ್ತಾರೆ. ದೇವರ ಮುಂದಣ ಕೆರೆಯ ಕೆಳಗೆ ಗದ್ದೆ ಸಲಗೆ ೪ ಮತ್ತಿಯ ಕೆರೆಯ ಕೆಳಗೆ ಗದ್ದೆ ದೇವಾಲಯದ ಮೂಡಲು ಕೆಳಗೂ ೧೦ ಬೆದ್ದಲೆ ಇನ್ನೂ ಮುಂತಾದ ಸ್ಥಳವನ್ನು ದಾನವಾಗಿ ದೇವರ ಸೇವೆಗಾಗಿ ಬಿಡುತ್ತಾರೆ. ಆನೆಕೆರೆಯ ಕೆಳಗೆ ೫ ಕೊಳಗ ಗದ್ದೆಯನ್ನು ಉಲ್ಲೇಖಿಸುವುದರ ಜೊತೆಗೆ ಇದೇ ಶಾಸನದ ಕೊನೆಯಲ್ಲಿ ಅನಂತರದ ಕಾಲದಲ್ಲಿ ಸೆಟ್ಟಿಕೆರೆಯ ಬಮ್ಮಯ್ಯ ನಾಯಕನೂ ಹಲಕೂರು ಗವುಡು ಪ್ರಜೆಗಳು ಒಪ್ಪಿ ಅ ಗದ್ದೆಗೆ ಬದಲಾಗಿ ಹಿರಿಯಕೆರೆಯ ಕೆಳಗೆ ಪ್ರತಿಕ್ಷೇತ್ರವನ್ನಿರಿಸಿದ್ದರು ಎಂದಿದೆ. ಈ ದಾನವು ಶಕ ೧೧೦೦ ಹೇಮಲಂಬಿ ಸಂವತ್ಸರದ ಬಾದ್ರಪದ ಮಾಸದ ಶನಿವಾರದಂದು ನೀಡಲಾಯಿತು.[೪೧]

**ಜಯಚಾಮರಾಜಪುರ(ಹಲುಕೂರು)ಉತ್ತರ ಪಾಳು ಕಲ್ಲೇಶ್ವರ ದೇವಾಲಯದ ಬಳಿ ಇರುವ ಶಿಲಾಶಾಸನ**

ಈ ಶಾಸನವು ಹೊಯ್ಸಳರ ಕಾಲಾವಧಿಗೆ ಸೇರಿದುದಾಗಿದೆ. ಈ ಶಾಸನವು ಎರಡು ಪ್ರಮುಖ ಗ್ರಾಮಗಳ ನಡುವೆ ಆದ ಭೂ ಪರಿವರ್ತನೆಯನ್ನು ತಿಳಿಸುವುದಾಗಿದೆ. ಹೊನ್ನವಳ್ಳಿಯ ಮಹಾಜನರು ಹಲಕೂರು ಗೌಡಪ್ರಜೆಗಳಿಗೆ ಹೇಳುವುದೇನೆಂದರೆ, ನಮ್ಮ ಪ್ರದೇಶವಾದ ಹೊನ್ನವಳ್ಳಿಯ ಕಾಲುವಳ್ಳಿ ಭಗವತೀ ಘಟ್ಟದಲ್ಲಿದ್ದ ತುಳಿಕೆಯ ಹಳ್ಳಿಯ ಹೊಲಸೀಮೆಯಲ್ಲಿರುವ ೭೪ ಮೆಟ್ಟಿನ ಗಳೆಯಲ್ಲಿ ಅಳೆದ ೪೩೦ ಕಂಬ ಭೂಮಿಗೆ ಬದಲಾಗಿ ಹಲಕೂರಿನ ಕಾಲುವಳ್ಳಿಯಾದ ತುಳಿಕೆಯ ಹಳ್ಳಿಯ ಭೂದಿಹಾಳು ಭಗವತೀಘಟ್ಟದ ೪೩೦ ಕಂಬ ಭೂಮಿಯನ್ನು ನೀಡಬೇಕೆಂದು ಕೇಳಿ ಅದಕ್ಕೆ ಎಲ್ಲರೂ ಒಪ್ಪಿ ಪರಿವರ್ತನ ಶಾಸನ ಬರೆಸಿಕೊಟ್ಟಿದ್ದಾರೆ. ಶಕ ವರ್ಷ ೧೨೯೭ ಆನಂದ ಸಂವತ್ಸರ, ಜೇಷ್ಠಮಾಸ ಬಹುಳ ಮಂಗಳವಾರದಂದು[೪೨] ಬರೆಯಲಾಗಿದೆ.

### ೩.೪.೧. ಸ್ಮಾರಕ ಶಾಸನ ಶಿಲ್ಪಗಳು

ಕನ್ನಡಿಗರು ಧಾರ್ಮಿಕ ನೆಲೆಗಟ್ಟಿನಿಂದಲೇ ಪ್ರಾಭಾವಿತಗೊಂಡಿದ್ದು, ಪ್ರಾಚೀನ ಕಾಲದಿಂದಲೂ ಮೋಕ್ಷ ಸಂಪಾದಿಸುವುದೇ ತಮ್ಮ ಗುರಿಯನ್ನಾಗಿಟ್ಟುಕೊಂಡು ಬದುಕುತ್ತಿದ್ದಾರೆ. ಇದಕ್ಕೆ ಆತ್ಮಾನುಸಂಧಾನ, ಆದರ್ಶಾನುಸಂಧಾನ ಮತ್ತು ಮೌಲ್ಯಾನುದಾನಗಳನ್ನು ಸಾಧನಗಳನ್ನಾಗಿ ಪರಿಭಾವಿಸಿಕೊಂಡಿದ್ದಾರೆ. ಆತ್ಮಾನುಸಂಧಾನದಿಂದ ಸಮಾಧೀಕರಣ, ಮೌಲ್ಯಾನುಸಂಧಾನದಿಂದ ಬಲಿದಾನ, ಸದ್ಗತಿ ಮತ್ತು ವೀರ ಮರಣ ಇವು ಸಮಾಜವು ರೂಢಿಸಿ ಬೆಳೆಸಿಕೊಂಡು

ಬಂದಿರುವ ಆಚರಣೆಗಳಾಗಿವೆ. ಇಂತಹ ಅಸಾಮಾನ್ಯ ವಿಶಿಷ್ಟ ಮರಣಗಳು ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿದ್ದುದನ್ನು ಗುರುತಿಸಬಹುದಾಗಿದ್ದು, ಇದರ ನೆನಪಿಗಾಗಿ ವೀರರ ಗುಡಿಗಳನ್ನು ನಿರ್ಮಿಸುವ, ಹಾಗೆಯೇ ಮಹಾಸತಿಗಲ್ಲು, ನಿಷಿಧಿಗಲ್ಲುಗಳನ್ನು ಪ್ರತಿಷ್ಠಾಪಿಸುವ ಪದ್ಧತಿಯು ಪರಂಪರೆಯಾಗಿ ಬೆಳೆದುಬಂದಿದೆ.[೪೩] ವೀರನ ತ್ಯಾಗ, ಬಲಿದಾನ, ಮಹಾಸತಿಯರ ಆದರ್ಶ ಗುಣ, ಸನ್ಯಾಸಿಗಳ ಪಾರಮಾರ್ಥಿಕ ಗುಣಗಳನ್ನು ತಿಳಿಸುವ ಮಾಧ್ಯಮಕ್ಕೆ ಸ್ಮಾರಕ ಶಿಲ್ಪಗಳೆಂದು ಹೆಸರು. ಈ ಸ್ಮಾರಕ ಶಿಲ್ಪಗಳು ಮೂಲತಃ ವ್ಯಕ್ತಿಯ ಶೌರ್ಯದ ಪ್ರತೀಕವಾದರೂ, ಅವು ನಾಡಿನ ಮೌಲ್ಯವನ್ನು ಪ್ರತಿಬಿಂಬಿಸುವ ಸೂಚನ ಫಲಕಗಳಾಗಿವೆ. ಯುದ್ಧವೀರ, ದಾನವೀರ, ಮಹಾಸತಿ, ಮೊದಲಾದವರ ಆದರ್ಶಗಳನ್ನು ಸೂಚಿಸುವ ಮತ್ತು ಸಮಾಜದ ಮೌಲ್ಯಗಳನ್ನು ಜೀವಂತವಾಗಿ ಸೆರೆಹಿಡಿಯುವಲ್ಲಿ ಸ್ಮಾರಕ ಶಿಲೆಗಳು ಮಹತ್ವದ ಪಾತ್ರವಹಿಸಿವೆ.

### ೩.೪.೨. ವೀರಗಲ್ಲುಗಳು

ವೀರ ಎಂಬುದು ಸಂಸ್ಕೃತ ಭಾಷೆಯ ಪದವಾಗಿದ್ದು, ಇದು ವೀರನ ಪರಾಕ್ರಮ ಮತ್ತು ಶೌರ್ಯವನ್ನು ಸೂಚಿಸುವಂತಹದ್ದಾಗಿದೆ. ವೀರ ಎಂಬ ಪದ ಬೀರ ಎಂಬ ತದ್ಭವ ರೂಪವನ್ನು ಪಡೆದು ಕೆಲವು ಪ್ರದೇಶಗಳಲ್ಲಿ ಬಳಕೆಯಲ್ಲಿರುವುದೂ ಉಂಟು. ವೀರ ಎಂಬ ಪದಕ್ಕೆ ಸಮನಾರ್ಥಕವಾಗಿ ಆಂಗ್ಲ ಭಾಷೆಯ Hero ಎಂಬ ಪದವನ್ನು ಬಳಸಬಹುದು. ಇದು ವೀರ, ವೀರತ್ವ, ಶೌರ್ಯ, ಪರಾಕ್ರಮವನ್ನು ಬಿಂಬಿಸುವ ಪದವಾಗಿದೆ. ವೀರನ ಪೌರುಷ, ಕೆಚ್ಚು, ಸ್ವಾಭಿಮಾನ, ತ್ಯಾಗಗಳು, ಕನ್ನಡಿಗರ ಹೆಮ್ಮೆಗೆ ಪಾತ್ರವಾಗಿವೆ. ಪಾರಂಪರಿಕ ಸಮಾಜದಲ್ಲಿ ದಾನದಂತೆ ವೀರ, ಅದರೊಂದಿಗೆ ಅವಿಭಾಜ್ಯ ಅಂಗಗಳಾಗಿ ಬರುವ ಪಾರಂಪರಿಕ ಗುಣಗಳು ಮಹತ್ವದ ಮೌಲ್ಯಗಳಾಗಿದ್ದವು. ಪತ್ನಿಯರು ಕೂಡ ತಮ್ಮ ಪತಿಯರಿಗೆ ವೀರತ್ವವನ್ನು ಮೆರೆಯಲು ಪ್ರೇರಣೆ ನೀಡುತ್ತಿದ್ದರು. ಹೇಡಿ ಎನಿಸಿಕೊಳ್ಳುವುದಕ್ಕಿಂತ ಅಂದಿನ ಜನರಿಗೆ ಸಾವು ಶ್ರೇಷ್ಠವಾಗಿತ್ತು. ತಮ್ಮ ಲೌಖಿಕ ಬದುಕಿನ ಬಗೆಗೆ ಎಂತಹ ಭಾವನೆ ತಾಳಿದರೆಂಬುದರ ಬಗೆಗಿನ ವಿಚಾರಗಳನ್ನು ತಿಳಿಸುವ ಶ್ಲೋಕವು ಕೂಡ ಉಲ್ಲೇಖಗೊಂಡಿದೆ.

'ಜಿತೇ ಲಭ್ಯತೇ ಲಕ್ಷ್ಮೀ ಮೃತೇ ನಾಪಿ ಸುರಾಂಗನಾ ।
ಕ್ಷಣವಿಧ್ವಂಸಿನಿ ಕಾಯೇ, ಕಾ ಚಿಂತಾ ಮರಣೇ ರಣೇ ॥

ಜಯಶಾಲಿಯಾದರೆ ಲಕ್ಷ್ಮೀ ಲಭಿಸುತ್ತಾಳೆ. ಮೃತನಾದರೆ ಸುರಾಂಗನೆಯರು, ನಿಮಿಷದಲ್ಲಿ ಅಳಿಯುವ ಈ ದೇಹಕ್ಕೆ ಕಾಳಗದಲ್ಲಿ ಅಳಿವೆನೆಂಬ ಕೊರಗೇಕೆ? ಇದು ಕನ್ನಡನಾಡಿನ ವೀರರ ಮಂತ್ರವಾಗಿತ್ತು. ಅಂತಹ ವೀರರ ವೀರಮರಣವನ್ನು ಘೋಷಿಸುತ್ತವೆ ವೀರಗಲ್ಲುಗಳು.[೪೪]

ಇಂತಹ ವೀರರ ಪರಾಕ್ರಮ ಇಡೀ ಲೋಕಕ್ಕೆ ತಿಳಿಯಲಿ, ಆತನಿಗೆ ಸ್ವರ್ಗ ಪ್ರಾಪ್ತವಾಗಲಿ, ಮುಂದಿನ ತಲೆಮಾರಿನ ಜನರು ಉತ್ತೇಜನಗೊಳ್ಳಲಿ ಮತ್ತು ಪ್ರೀತಿ, ವಿಶ್ವಾಸ, ಕೃತಜ್ಞತೆಯನ್ನು ವ್ಯಕ್ತಪಡಿಸುವ ಉದ್ದೇಶದಿಂದ ಇಂತಹ ವೀರಗಲ್ಲುಗಳನ್ನು ಹಾಕಿಸುತ್ತಿದ್ದರು.

ವೀರನೊಬ್ಬನ ಸ್ಮಾಕರವಾಗಿ ನಿಲ್ಲಿಸಿದ ಶಿಲೆಯೇ ವೀರಗಲ್ಲು. ವ್ಯಕ್ತಿಯೊಬ್ಬ ತನ್ನ ಪ್ರಾಣರಕ್ಷಣೆಗಾಗಿ, ಸಮಾಜದ ರಕ್ಷಣೆಗಾಗಿ ಆಸ್ತಿ, ಸ್ತ್ರೀ, ದನಕರುಗಳ, ಗಡಿಗಳ, ಊರಳಿವುಗಳ ರಕ್ಷಣೆಗಾಗಿ ಶತ್ರುಗಳೊಡನೆ ಹೋರಾಡಿ ಮರಣ ಹೊಂದಿದ ವಿವಿಧ ರೀತಿಯ ವೀರಗಲ್ಲುಗಳಿವೆ.

ರನ್ನನು ತನ್ನ ಪ್ರಮುಖ ಕೃತಿಯಾದ 'ಗದಾಯುದ್ಧ' ಅಥವಾ 'ಸಾಹಸಭೀಮ ವಿಜಯ'ದಲ್ಲಿ ಈ ಕೆಳಗಿನಂತೆ ಹೇಳುತ್ತಾನೆ.

ತುರುಗಳೋಳ್ ಪೆಣ್ಬುಯ್ಯಲೊ
ಳೆರೆವೆಸದೊಳ್ ನಂಟನೆಡರೊಳ್ ಊರಳಿವಿನೊಳೆಂ
ತರಿಸಂದು ಗಂಡುತನ ಮನೆ
ನೆರಪದವಂ ಗಂಡನಲ್ಲನೆಂತೂ ಷಂಡಂ

ಈ ಮೇಲಿನ ಪದ್ಯದಿಂದ ಅಂದಿನ ಕಾಲದಲ್ಲಿ ತುರುಗಳನ್ನು ರಕ್ಷಿಸುವುದು. ಸ್ತ್ರೀಯರ ಮಾನ ಕಾಪಾಡುವುದು, ಊರುಗಳನ್ನು ರಕ್ಷಿಸುವುದು, ಗಂಡಸರ ಪರಮ ಕರ್ತವ್ಯವಾಗಿತ್ತೆಂಬುದು ತಿಳಿದುಬರುತ್ತದೆ. ದನಗಳನ್ನು ಅಪಹರಿಸಿದಾಗ ಅವುಗಳನ್ನು ರಕ್ಷಿಸಿಕೊಳ್ಳಲು ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದರು.[೪೫] ಹೋರಾಟದಲ್ಲಿ ಮರಣ ಹೊಂದಿನ ನೆನಪಿಗಾಗಿ ಆತನ ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿಯರು, ಸಾರ್ವಜನಿಕರು, ಊರಿನ ಪ್ರಮುಖ ವ್ಯಕ್ತಿಗಳು ಇಂತಹ ವೀರಗಲ್ಲನ್ನು ಹಾಕಿಸುತ್ತಿದ್ದರು. ಒಟ್ಟಾರೆ ಹೋರಾಟದಲ್ಲಿ ಮಡಿದ ವೀರರ ದ್ಯೋತಕವಾಗಿ ನಿಲ್ಲಿಸಿದ ಶಿಲೆಯೇ ವೀರಗಲ್ಲು ಕೆಲವು ವೀರಗಲ್ಲುಗಳಲ್ಲಿ ಶಿಲ್ಪಗಳ ಜೊತೆಗೆ ಶಾಸನಗಳು ಕಂಡುಬರುತ್ತದೆ. ಇದರಿಂದ ಅದರ ಕಾಲ ಮತ್ತು ನೆಡಲಾದ ಉದ್ದೇಶವನ್ನು ತಿಳಿಯಬಹುದು. ಸಾಮಾನ್ಯವಾಗಿ ವೀರಗಲ್ಲುಗಳು ಕೆರೆಯ ಏರಿಯ ಬಳಿ ಊರಿನ ಜನಕ್ಕೆ ಹೆಚ್ಚು ಸೇರುವ ಜಾಗದಲ್ಲಿ, ಹೊಲಗದ್ದೆಗಳ ಬದುಗಳಲ್ಲಿ ದೇವಾಲಯದ ಪಕ್ಕದ ಆವರಣದಲ್ಲಿ ವೀರಗಲ್ಲುಗಳು ಕಾಣಸಿಗುತ್ತದೆ.

ಪ್ರಸ್ತುತ ಕಣಕಟ್ಟೆ ಹೋಬಳಿಯ ಕಲ್ಲುಂಡಿಯಲ್ಲಿ ಒಂದು ಹಲಕೂರಿನಲ್ಲಿ ಆರು ಚಿಕ್ಕಕೊಂಡಿಹಳ್ಳಿಯಲ್ಲಿ ಒಂದು, ಶಂಕರನಹಳ್ಳಿಯಲ್ಲಿ ಆರು ಮತ್ತು ದೊಡ್ಡಘಟ್ಟದಲ್ಲಿ ಎರಡು ವೀರಗಲ್ಲುಗಳನ್ನು ಕಾಣಬಹುದು.

## ತುರುಗೋಳ್(ಗೋಗ್ರಹಣ)

ಯುದ್ಧ ಪ್ರಭೇದಗಳಲ್ಲಿ ಅತಿ ಮುಖ್ಯವಾದುದು "ತುರುಗೋಳ್" (ತುರು+ಕೋಳ್, 'ಕೋಳ್' ಎಂಬುದು ತೆಗೆದುಕೊ ಎಂಬರ್ಥದ ಕೊಳ್ ಧಾತುವಿನ ಭಾವನಾಮ) ಕಳ್ಳರು ಬಂದು ದನಗಳನ್ನು(ಮುಖ್ಯವಾಗಿ ಹಸುಗಳನ್ನು, ಎಮ್ಮೆಗಳನ್ನು) ಕದಿಯುತ್ತಿದ್ದುದನ್ನು 'ತುರುಗೋಳ್' ಎಂದು ದನಗಳನ್ನು ರಕ್ಷಿಸಲು ನಡೆದ ಯುದ್ಧವನ್ನೂ 'ತುರುಗೋಳ್' ಎಂದೂ ಶಾಸನಗಳು ಕರೆದಿವೆ. ಭರತಖಂಡದಲ್ಲಿ ಹಸುಗಳನ್ನು ಒಂದು ಐಶ್ವರ್ಯವೆಂದೇ ಹಿಂದಿನ ಕಾಲದಿಂದ ಭಾವಿಸಿದ್ದಾರೆ. (ಗೋಧನ) ಅವುಗಳನ್ನು ಕದಿಯುವುದು ಕಳ್ಳರಿಗೆ ಬಹುಪ್ರಿಯವಾಗಿತ್ತು. ಪ್ರಾಚೀನ ಕರ್ನಾಟಕದಲ್ಲಿ ಜನರಿಗಿಂತ ದನಗಳು ಹೆಚ್ಚು ಅರಕ್ಷಿತ ಸ್ಥಿತಿಯಲ್ಲಿದ್ದಂತೆ ಊಹಿಸಬಹುದು. ಕಳ್ಳರು ಬಂದು ಕದ್ದಾಗ, ಗೋವುಗಳನ್ನು ಕಾಯುತ್ತಿದ್ದ ಗೋವಳರು ಮತ್ತು ಇತರರು ಹುಯ್ಯಲನ್ನೆಬ್ಬಿಸುತ್ತಿದ್ದರು (ತುರುಗೋಳಿಗೆ ಹುಯ್ಯಲು ಎಂಬ ಹೆಸರೂ ಇದೆ). ಊರಿನ ಜನರು ಅವುಗಳನ್ನು ರಕ್ಷಿಸಲು ಮುಂದಾಗುತ್ತಿದ್ದರು. ಈ ಸಮಯದಲ್ಲಿ ಹೋರಾಡಿ ಸತ್ತವರ ಸ್ಮಾರಕಗಳು ನೂರಾರು ದೊರಕುತ್ತವೆ. ತುರುಗೋಳದಲ್ಲಿ ಶೌರ್ಯವನ್ನು ಮೆರೆಯದವರನ್ನು ಹೇಡಿಯೆಂದೇ ಜನರು ಭಾವಿಸುತ್ತಿದ್ದರು. ಮೊದಲನೆಯದಾಗಿ ಗೋವು ಪೂಜನೀಯವಾದುದು. ಎರಡನೆಯದಾಗಿ ಅದು ಕಳೆದುಕೊಳ್ಳಲಾಗದ ಆಸ್ತಿ. ಮೂರನೆಯದಾಗಿ ಅವುಗಳನ್ನು ಕಳೆದುಕೊಳ್ಳುವುದರಲ್ಲಿ ಊರಿನ, ವ್ಯಕ್ತಿಯ ಮಾನಾಪಮಾನದ ಪ್ರಶ್ನೆಯೂ ಇದೆ.[೪೬]

## ತುರುಗೊಳ್ ವೀರಗಲ್ಲುಗಳು

ಕಣಕಟ್ಟೆಯಲ್ಲಿ ಸಿಕ್ಕಿರುವ ೩ ವೀರಗಲ್ಲುಗಳು ತುರುಗಳನ್ನು ಅಂದರೆ ದನಗಳನ್ನು ಅಪಹರಣಕಾರರು ಕದ್ದು ಒಯ್ಯುವಾಗ ಹೋರಾಟ ಮಾಡಿ ಮಡಿದು ವೀರಸ್ವರ್ಗ ಪಡೆದುದರ ಬಗ್ಗೆ ವಿವರಿಸುತ್ತದೆ.

ಇಲ್ಲಿ ಶೃಂಗನಾಥೇಶ್ವರ ದೇವಾಲಯದ ಹಿಂದಿ ಪಶ್ಚಿಮ ಕಂಬದ ಪೂರ್ವಾಭಿಮುಖವಾಗಿ ನಿಲ್ಲಿಸಿರುವ ವೀರಗಲ್ಲು ಸುಮಾರು ೪ ಅಡಿ ಎತ್ತರ, ೨ ಅಡಿ ಅಗಲವಾಗಿದೆ. ಇದರಲ್ಲಿ ತುರುಗಳ ಕಾಳಗದಲ್ಲಿ ಮಹಾಸಾಮಂತ ಮಾಚಯ್ಯನ ಮಗ ಮಸಣಯನು ಮೃತನಾದುದನ್ನು ತಿಳಿಸುತ್ತದೆ.[೪೭]

ಇದೇ ಸ್ಥಳದ ಇನ್ನೊಂದು ವೀರಗಲ್ಲು ಅರ್ಧಮಣ್ಣಿನಲ್ಲಿ ಹೂತಿದೆ. ೨ ಅಡಿಯಷ್ಟು ಭಾಗ ಭೂಮಿಯ ಮೇಲೆ ಕಾಣುತ್ತದೆ. ಕಣಕಟ್ಟೆಯ ದನಗಳನ್ನು ಅಪಹರಣಕಾರರು ಒಯ್ಯುವಾಗ ಅಣುವನಕೆರೆಯ ಸೇನಭೋವನಾದ ಜಕ್ಕಯನ ಅಳಿಯ ಮಾರಯನು ಮೃತನಾದನು. ಅದಕ್ಕಾಗಿ ಈ ವೀರಗಲ್ಲನ್ನು[೪೮] ನೆಡಿಸಿದ್ದಾರೆ.

ಇಲ್ಲಿನ ಇನ್ನೊಂದು ವೀರಗಲ್ಲಿನಲ್ಲಿ ಬಸವೆಬೋವನ ಮಗ ಹಲೆಯನು ತುಂಬುಳಲು ತುರಕಾಳಗದಲ್ಲಿ ವೀರಮರಣವನ್ನು ಅಪ್ಪಿದನು ಎಂದು ಉಲ್ಲೇಖಿಸಲಾಗಿದೆ. ಈ ಮೂರು ವೀರಗಲ್ಲುಗಳು ಕ್ರಿ.ಶ.೧೩ನೇ ಶತಮಾನಕ್ಕೆ ಸೇರಿದವಾಗಿವೆ.[೪೯]

ಜಯಚಾಮರಾಜಪುರದಲ್ಲಿ ಊರಿಗೆ ಉತ್ತರ ಪಾಳು ಕಲ್ಲೇಶ್ವರ ದೇವಾಲಯದ ಬಳಿ ಇರುವ ವೀರಗಲ್ಲು. ಇದರಲ್ಲಿ ಈ ಪ್ರದೇಶದ ನಿವಾಸಿಗಳಾದ ಮಲ್ಲಶೆಟ್ಟಿ ಆತನ ಪುತ್ರ ಮಹಿಲಿಶೆಟ್ಟಿ, ಅವನ ಭಾವ ಕಾಮಿಶೆಟ್ಟಿ ಈತನ ತಮ್ಮ ಬೋಕಿಸೆಟ್ಟಿ ಇವರು ಅಪಹರಣಕಾರರು ತುರುಗಳನ್ನು ಕದ್ದೊಯ್ಯುವಾಗ ಅವರೊಡನೆ ಕಾದಾಡಿ ಎಲ್ಲರೂ ಮಡಿದರು. ಪರೋಕ್ಷ ವಿನಯವಾಗಿ ಬೋಕಿಶೆಟ್ಟಿಯ ಮಗಳು ಮಹಾದೇವಿ ಈ ವೀರಗಲ್ಲನ್ನು ನೆಡಿಸಿದಳು. ಕ್ರಿ.ಶ.೧೩೧೩ರ ಕಾಲಾವಧಿಯಲ್ಲಿ ನೆಡಿಸಿದಳು.[೫೦]

ಶಂಕರನಹಳ್ಳಿಯಲ್ಲಿ ಸಿಕ್ಕಿರುವ ವೀರಗಲ್ಲುಗಳಲ್ಲಿ ಕ್ರಿ.ಶ.೧೨೯೯ರ ಒಂದು ಶಾಸನದ ತುರುಕಾಳಗದ ಕಾರಣ ಭಿನ್ನವಾಗಿದೆ. ಇಲ್ಲಿ ದನಗಳ ಕಳ್ಳತನವಾಗಲೀ, ರಾಜಕೀಯ ಕಾರಣಗಳಾಗಲೀ ಮುಖ್ಯವಾಗದೇ ವೈಯಕ್ತಿಕ ದ್ವೇಷ ಮುಖ್ಯವಾದಂತೆ ಕಂಡುಬರುತ್ತದೆ. ಶಂಕರಹಳ್ಳಿಯ ಮಹಾವಡ್ಡ ವ್ಯವಹಾರಿ ನಾನಾದೇಸಿ ಮಲೆಯಾಳ ಸಂಕರಶೆಟ್ಟಿ ಎಂಬ ವ್ಯಾಪಾರಿ ನೆಲೆಸಿದ್ದು, ಇವನ ಅಳಿಯಂದಿರು ಶಂಖರಚ್ಚ ಪಣಿಕರರು ಹಾಗೂ ಜಗಚ್ಚನಾಯರು ಹುಳಿಯಾರದಲ್ಲಿ ಕೆಸೆವಯ ಬೊಮ್ಮನೆಂಬುವವನನ್ನು ಕೊಂದ ಕಾರಣಕ್ಕೆ ಮಗರೆ ನಾಡಿನವರು ಈ ಗೋಗ್ರಹಣವನ್ನು ಮಾಡಿ ಇಬ್ಬರನ್ನು ಕೊಂದಿದ್ದಾರೆ. ಹುಳಿಯೂರು ಮಗರೆನಾಡಿನ ರಾಜಧಾನಿಯಾಗಿದ್ದು, ಈ ಬೊಮ್ಮ ಪ್ರಮುಖ ವ್ಯಕ್ತಿಯಾಗಿದ್ದಿರಬೇಕು. ಅವನನ್ನು ಕೊಂದ ತಪ್ಪಿಗೆ ಶಂಕರಶೆಟ್ಟಿಯ ಶೆಟ್ಟಿಪಟ್ಟಣ ವಾಗಿದ್ದ ಶಂಕರನಹಳ್ಳಿಯನ್ನು ಮುತ್ತಿ ತುರುಗಳನ್ನು ಅಪಹರಿಸಲಾಗಿದೆ. ಈ ಶಂಕರನಹಳ್ಳಿಯಲ್ಲಿ ಹಾಳಾಗಿ ಬಿದ್ದಿರುವ ಅನೇಕ ತುರುಗೋಳ್ ಶಾಸನಗಳನ್ನು ಗಮನಿಸಿದಾಗ ಈ ಗ್ರಾಮವು ಪದೇ ಪದೇ ಈ ರೀತಿಯ ಆಕ್ರಮಣಗಳಿಗೆ ಗುರಿಯಾಗಿರುವುದು ಸ್ಪಷ್ಟವಾಗುತ್ತದೆ.[೫೧]

ಹಲಕೂರಿನ ತುರುಗಾಳಗದಲ್ಲಿ(ಕ್ರಿ.ಶ.೧೩೧೧) ಒಂದೇ ಕುಟುಂಬದ ನಾಲ್ವರು ಮಡಿದಾಗ ಅವರ ನೆನಪಿಗೆ ಆ ಕುಟುಂಬದ ಬೋಕಿಶೆಟ್ಟಿಯ ಮಗಳು ಮಹಾದೇವಿ ವೀರಗಲ್ಲನ್ನು ನಿಲ್ಲಿಸಿದಳು.[೫೨] ಚಿಕ್ಕಕೋಡಿಹಳ್ಳಿಯಲ್ಲಿ ಸೋಮೆಯ ನಾಯಕನು ನಾರಸಿಂಘದೇವನ ಸ್ವಾಮಿಯ ಕಾರ್ಯಕ್ಕೆ ಹೋದಾಗ ಅಲ್ಲಿ ನಡೆದ ಯುದ್ಧದಲ್ಲಿ ಕಾದಾಡಿ ಮಡಿದನು. ಆತನ ಸ್ಮರಣಾರ್ಥ ಅವನ ಪತ್ನಿ ಮಾಚಿಯಬ್ಬೆ ವೀರಗಲ್ಲನ್ನು ನಿಲ್ಲಿಸಿದಳು.[೫೩] ದೊಡ್ಡಘಟ್ಟದ ವೀರಗಲ್ಲಿನಲ್ಲಿ ವೀರನು ಕುದುರೆ ಸವಾರಿ ಮಾಡುವವನ ತಲೆಯನ್ನು ಕತ್ತರಿಸಿ ಅದನ್ನು ತನ್ನ ಕೈಯಲ್ಲಿ ಹಿಡಿದಿರುವುದು ವಿಶೇಷವೆನಿಸಿದೆ.[೫೪]

ಜೆ.ಸಿ.ಪುರದಲ್ಲಿ ಅನೇಕ ವೀರಗಲ್ಲುಗಳೂ ಸಿಕ್ಕಿದ್ದು ಅದರಲ್ಲಿ ಒಂದು ವೀರಗಲ್ಲು ಶಿಲ್ಪಗಳಿಂದಲೇ ತುಂಬಿ ಹೋಗಿದೆ. ಈ ಶಿಲ್ಪಗಳಲ್ಲಿ ೪ ಹಂತಗಳಿವೆ. ಕೆಳ ಹಂತದಲ್ಲಿ ವೀರನು ವೈರಿಯ ವಿರುದ್ಧ ಕಾದಾಡುತ್ತಾ ನಿಂತಿರುವುದನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ವೀರನು ಉದ್ದವಾದ ಎತ್ತರದ ಈಟಿಯನ್ನು ತನ್ನ ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಮೇಲಕ್ಕೆತ್ತಿ ಹಿಡಿದು ನಿಂತಿದ್ದರೆ, ವೈರಿಯು ಆತನಿಗೆ ಬಾಣವನ್ನು ಪ್ರಯೋಗಿಸಿ ಬಿಲ್ಲನ್ನು ಹಿಡಿದು ನಿಂತಿದ್ದಾನೆ. ಇವರ ಬಲಕ್ಕೆ ದನ ಕರುಗಳಿವೆ. ಎರಡನೇ ಹಂತದಲ್ಲಿ ವೀರನು ವೈರಿ ಪಡೆಯ ವಿರುದ್ಧ ಕಾದಾಡುವ ದೃಶ್ಯವಿದೆ. ಮೂರನೇ ಹಂತದಲ್ಲಿ ವೀರನು ಸರಳವಾದ ತ್ರಿಕೋನಾಕಾರದ ವಿಮಾನದಲ್ಲಿ ಕಾಲುಗಳನ್ನು ಪದ್ಮಾಸನದಲ್ಲಿ ಹಾಕಿ ಎರಡು ಕೈಗಳನ್ನು ಮುಗಿದ ರೀತಿಯಲ್ಲಿ ಅವುಗಳನ್ನು ಬಗ್ಗಿಸಿ, ಹಿಗ್ಗಿಸಿಕೊಂಡು ಹಿಡಿದುಕೊಂಡಿದ್ದಾನೆ. ನಾಲ್ಕನೇ ಹಂತದಲ್ಲಿ ಇದೇ ಭಂಗಿಯಲ್ಲಿ ಶಿವಲಿಂಗದ ಎಡಕ್ಕೆ ಕುಳಿತಿದ್ದಾನೆ. ಶಿವಲಿಂಗದ ಎಡಕ್ಕೆ ನಿಂತ ಯತಿ ಅದನ್ನು ಆರಾಧಿಸುತ್ತಿದ್ದಾನೆ. ಬಲಕ್ಕೆ ನಂದಿಯಿದೆ. ಕಾಲಮಾನ ಕ್ರಿ.ಶ.ಸುಮಾರು ೧೩ನೇ ಶತಮಾನ.[೨೫]

ಇದೇ ಸ್ಥಳದಲ್ಲಿ ಸಿಕ್ಕಿರುವ ಮತ್ತೊಂದು ವೀರಗಲ್ಲಿನಲ್ಲಿ ವೈವಿಧ್ಯಮಯವಾದ ಹೋರಾಟದ ಮೂರು ಹಂತದ ದೃಶ್ಯಗಳು ಮತ್ತು ಇನ್ನಿತರ ವಿವರಗಳು ಕಂಡುಬರುತ್ತದೆ ಮತ್ತು ವಿಶೇಷವೆನಿಸುತ್ತದೆ. ಈ ಮೂರು ಹಂತಗಳಲ್ಲಿ ಕಾಲ್ದಳವನ್ನು ಬಲಕ್ಕೆ ಮತ್ತು ಎಡಕ್ಕೆ ಕುದುರೆ ದಳವನ್ನು ಸಾಲಾಗಿ ಚಿತ್ರಿಸಲಾಗಿದೆ. ಮೊದಲ ಹಂತದಲ್ಲಿ ಮೂವರು ಬಿಲ್ಲನ್ನು ಎಡಗೈಯಲ್ಲಿ ಹಿಡಿದು ಮುಂದಕ್ಕೆ ಮಾಡಿಕೊಂಡು ನಿಂತಿದ್ದಾರೆ. ಅವರ ಮುಂದೆ ಒಬ್ಬನು ನಿಂತಿದ್ದಾನೆ. ಅವನ ಮುಂದೆ ಇಬ್ಬರು ಪರಸ್ಪರ ಎದುರಾಗಿ ತಮ್ಮ ಬಿಲ್ಲುಗಳನ್ನು ಒಂದಕ್ಕೊಂದು ಆನಿಸಿ ಕಾದಾಡುವ ರೀತಿಯಲ್ಲಿ ನಿಂತಿದ್ದಾರೆ. ಎಡಗಡೆಗೆ ಮೂವರು ಕುದುರೆ ದಳದವರು ವೀರನ ಕಡೆ ಹೋಗುತ್ತಿದ್ದಾರೆ. ಎರಡನೇ ಸಾಲಿನಲ್ಲಿ ಕಾಲ್ದಳ ಮತ್ತು ಕುದುರೆ ದಳದವರು ಪರಸ್ಪರ ಹೋರಾಡಲು ಹೊರಟಿದ್ದಾರೆ. ಮೂವರಲ್ಲಿ ಏಳು ಸೈನ್ಯದಳದವರು ವೀರನ ಜೊತೆ ಕುದುರೆ ಸವಾರ ವೈರಿಯ ವಿರುದ್ಧ ಕಾದಾಡಲು ನಿಂತಿದ್ದಾರೆ. ೪ನೇ ಸಾಲಿನಲ್ಲಿ ಏಕ ಅಂತಸ್ತಿನ ವಿಮಾನದಲ್ಲಿ ಮೂವರು ಕುಳಿತಿದ್ದು, ವಿಮಾನಕ್ಕೆ ಕಟ್ಟಿದ ಹಗ್ಗಗಳನ್ನು ಇಬ್ಬರು ಅಪ್ಸರೆಯರು ಹಿಡಿದು ಹಾರುತ್ತಿದ್ದಾರೆ. ಇವರ ಬದಿಯಲ್ಲಿ ತಲಾ ಒಂದು ಕಡೆ ಮೂವರು ಸೈನಿಕರು ನಿಂತಿದ್ದಾರೆ. ಪ್ರಮಾಣಬದ್ಧವಾಗಿ ಮಕರ ತೋರಣವನ್ನು ಪೀಠದ ಮೇಲೆ ಚಿತ್ರಿಸಲಾಗಿದೆ. ಕಲಶದ ಬದಿಗಳಲ್ಲಿ ಅಂತಸ್ತಿನ ಕಿಟಕಿಗಳಿವೆ. ಐದನೇ ಸಾಲಿನಲ್ಲಿ ಒಟ್ಟು ಹದಿನಾರು ಮಂದಿ(ಹೆಂಗಸರು) ಏಕ ಸಾಲಿನಲ್ಲಿ ನಿಂತಿದ್ದಾರೆ. ಎಂಟು ಮಂದಿ ಬಲಗಡೆಯಿಂದ ಎಂಟು ಮಂದಿ ಎಡಗಡೆಯಿಂದ ಪರಸ್ಪರ ಹೋಗುತ್ತಿದ್ದಾರೆ. ಆರನೇ ಸಾಲಿನಲ್ಲಿ ಹದಿಮೂರು ಜನ ವಾದ್ಯಮೇಳದವರು ನಿಂತಿದ್ದಾರೆ. ಕೊನೆಯ ಫಲಕದಲ್ಲಿ ನಡುವೆ

ಕುದುರೆ ಸವಾರ ಅದರ ಬದಿಗಳಲ್ಲಿ ಸೇವಕರು, ನಂದಿ ಇತ್ಯಾದಿ ಚಿತ್ರಗಳಿವೆ. ಕಾಲಮಾನ ಕ್ರಿ.ಶ.ಸುಮಾರು೧೩ನೇ ಶತಮಾನ.[೫೬]

ಇದೇ ಸ್ಥಳದಲ್ಲಿ ಸಿಕ್ಕಿರುವ ಮತ್ತೊಂದು ವೀರಗಲ್ಲಿನಲ್ಲಿ ಯುದ್ಧ ದೃಶ್ಯವನ್ನು ಎರಡು ಸಾಲುಗಳಲ್ಲಿ ಚಿತ್ರಿಸಲಾಗಿದೆ. ಒಂದೇ ಎತ್ತರ ಮತ್ತು ರೀತಿಯಲ್ಲಿ ನಾಲ್ವರು ವೀರರು ನಿಂತಿದ್ದು, ಬಲಗಡೆಯಲ್ಲಿ ಒಬ್ಬ ಚಾಮರ ಹಿಡಿದು ನಿಂತಿದ್ದಾನೆ. ಮತ್ತೊಬ್ಬ ವ್ಯಕ್ತಿ ತುದಿ ಕತ್ತಿ ಮತ್ತು ಗುರಾಣಿ ಹಿಡಿದು ನಿಂತಿರುವನು. ಎಡಗಡೆಯ ವೈರಿ ಪಡೆಯಲ್ಲಿ ವೈರಿಯು ತನ್ನ ಬಿಲ್ಲನ್ನು ವೀರನು ಎಡಗೈಯಲ್ಲಿ ಹಿಡಿದು ಗುರಾಣಿಗೆ ಒತ್ತಿ ಹಿಡಿದಿದ್ದಾನೆ. ಇನ್ನೊಂದು ಕೈಯಲ್ಲಿ ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದಿದ್ದಾನೆ. ಅವನ ಇನ್ನೀರ್ವರಲ್ಲಿ ಒಬ್ಬನು ಬಿಲ್ಲುಬಾಣ, ಇನ್ನೊಬ್ಬನು ಕತ್ತಿ ಗುರಾಣಿಗಳನ್ನಿಡಿದು ನಿಂತಿದ್ದಾರೆ. ಇಲ್ಲಿ ಹಿಡಿದ ಆಯುಧಗಳಲ್ಲಿ ಬಿಲ್ಲು ಮತ್ತು ಕತ್ತಿ ಹಿಡಿದಿರುವುದು ಅಸಮಂಜಸವೆನಿಸುತ್ತದೆ. ಮೇಲಿನ ಸಾಲಿನಲ್ಲಿ ಎಡಗಡೆಯಿಂದ ಒಬ್ಬ ಸೇವಕ ಚಾಮರವನ್ನು ಹಿಡಿದು ಕುದುರೆ ಸವಾರನ ತಲೆಯ ಮೇಲೆ ಹಿಡಿದು ನಿಂತಿದ್ದಾನೆ. ವೀರನ ಬದಿಗಳಲ್ಲಿಬ್ಬರು ನಿಂತಿದ್ದಾರೆ. ಕುದುರೆ ಮುಂದೆ ನಿಂತವನು ಬಿಲ್ಲನ್ನು ಎದುರಿಗೆ ನಿಂತ ವೀರನ ಈಟಿಗೆ ಆನಿಸಿ ಒತ್ತಿ ಹಿಡಿದಿದ್ದಾನೆ. ಇವರೀರ್ವರು ನೆಲದ ಮೇಲೆ ಸತ್ತು ಬಿದ್ದ ಒಂದು ಹೆಣದ ಮೇಲೆ ಕಾಲನ್ನಿಟ್ಟು ನಿಂತಿದ್ದಾರೆ. ವೀರನ ಬಲಕ್ಕೆ ನಿಂತ ಒಬ್ಬನು ಬಿಲ್ಲನ್ನು ವೀರನ ಕಡೆ ಎತ್ತಿ ಹಿಡಿದಿದ್ದು ತನ್ನ ಎಡಗೈಯಲ್ಲಿ ಬಾಣ ಮೇಲೆತ್ತಿದ್ದಾನೆ. ಎರಡನೇ ಸ್ವರ್ಗಾರೋಹಣದಲ್ಲಿ ವೀರನನ್ನು ವಿಮಾನದಲ್ಲಿ ಕೂಡಿಸಲಾಗಿದೆ. ವಿಮಾನದ ಬದಿಗಳಲ್ಲಿನ ಅರೆಗಂಬಗಳಿಗೆ ಕಟ್ಟಿದ ಹಗ್ಗವನ್ನು ಹಿಡಿದು ಅಪ್ಸರೆಯರು ಹಾರುತ್ತಿದ್ದಾರೆ. ತಮ್ಮ ಇನ್ನೊಂದು ಕೈಯಲ್ಲಿ ಚೌರಿ ಹಿಡಿದಿದ್ದಾರೆ. ಮೇಲ್ಗಡೆ ವಾದ್ಯಮೇಳದವರಿದ್ದಾರೆ. ಸ್ವರ್ಗದೃಶ್ಯದಲ್ಲಿ ಮಡಿದ ವೀರ ಶಿವಲಿಂಗ ಮತ್ತು ಕುಳಿತ ನಂದಿ ಇದೆ. ಕಾಲಮಾನ ಕ್ರಿ.ಶ.ಸುಮಾರು ೧೨ನೇ ಶತಮಾನ.[೫೭]

ಕಣಕಟ್ಟೆಯ ವೀರಗಲ್ಲಿನ ಯುದ್ಧ ದೃಶ್ಯದಲ್ಲಿ ವೀರನು ಬಹುಶಃ ವೈರಿಯ ಜುಟ್ಟನ್ನು ಒಂದು ಕೈಯಲ್ಲಿ ಬಿಗಿಯಾಗಿ ಹಿಡಿದು ಇನ್ನೊಂದು ಕೈಯಲ್ಲಿ ಹಿಡಿದ ಕಿರುಗತ್ತಿಯಿಂದ ಅವನ ದೇಹಕ್ಕೆ ಇರಿಯುತ್ತ ನಿಂತಿದ್ದಾನೆ. ಈತನ ಶಿರಕ್ಕೆ ಎಡಗಡೆ ನಿಂತವನು ಈಟಿಯಿಂದ ಇರಿದು ನಿಂತಿದ್ದಾನೆ. ಬಲಗಡೆ ಇರುವವನ ಚಿತ್ರವನ್ನು ಗಾತ್ರದಲ್ಲಿ ಸ್ವಲ್ಪ ದೊಡ್ಡದಾಗಿ ಚಿತ್ರಿಸಿದ್ದನ್ನು ಗಮನಿಸಿದರೆ, ಈತ ವೈರಿಯನ್ನು ಕೊಂದ ಬಳಿಕ, ಮರಣವನ್ನಪ್ಪಿದ್ದರಿಂದ ಈ ವೀರಗಲ್ಲನ್ನು ನಿಲ್ಲಿಸಿರಬೇಕೆಂದು ತಿಳಿದುಬರುತ್ತದೆ. ಸ್ವರ್ಗಾರೋಹಣದಲ್ಲಿ ವೀರನು ಕುಳಿತ ವಿಮಾನದ ಅರೆಗಂಬಗಳಿಗೆ ಅಪ್ಸರೆಯರು ತಮ್ಮ ಕಾಲುಗಳನ್ನು ಬಗ್ಗಿಸಿದ ಮೊಣಕಾಲುಗಳನ್ನು ಆನಿಸಿ ಹಾರುತ್ತಿದ್ದು, ಒಂದು ಕೈಯಲ್ಲಿ ವಿಮಾನದ ಕಪೋತವನ್ನು ಇನ್ನೊಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಸ್ವರ್ಗ ದರ್ಶನದಲ್ಲಿ ಶಿವಲಿಂಗದ ಮುಂದೆ ಕೈಮುಗಿದು ವೀರ ಕುಳಿತಿದ್ದು, ಬದಿಗೆ

ಉದ್ದ ಜಡೆಯ ಯತಿ ಅದಕ್ಕೆ ಕೈ ಮುಗಿದು ನಿಂತಿರುವುದು ವಿಶೇಷವೆನಿಸಿದೆ. ಶಿವಲಿಮಗದ ಎಡಕ್ಕೆ ಪಾಣಿಪೀಠದ ಬುಡದಲ್ಲಿ ಕುಳಿತ ನಂದಿಯಿದೆ. ಕಾಲಮಾನ ಸು.ಕ್ರಿ.ಶ.೧೨ನೇ ಶತಮಾನ.[೫೮]

ಕಣಕಟ್ಟೆಯ ಮತ್ತೊಂದು ವೀರಗಲ್ಲು ಮೂವರು ಯುದ್ಧದಲ್ಲಿ ಮಡಿದಿದ್ದನ್ನು ಪ್ರತಿನಿಧಿಸುತ್ತದೆ. ಯುದ್ಧ ದೃಶ್ಯವನ್ನು ಎರಡು ಹಂತಗಳಲ್ಲಿ ಚಿತ್ರಿಸಲಾಗಿದೆ. ಮೊದಲ ಹಂತದಲ್ಲಿ ಮೂವರು ವೀರರು ಕ್ರಮವಾಗಿ ಈಟಿ–ಕತ್ತಿ ಬಾಣ ಪ್ರಯೋಗಿಸುತ್ತಿರುವ ಬಿಲ್ಲನ್ನು ಹಿಡಿದು ನಿಂತಿದ್ದಾರೆ. ಈ ಫಲಕದ ಬುಡದಲ್ಲಿ ಆರು ಕಂಬಗಳುಳ್ಳ ಕೋಣೆಯನ್ನು ಚಿತ್ರಿಸಿರುವುದು ಅಪರೂಪದ್ದೆನಿಸಿದೆ. ಇಲ್ಲಿ ಬಹುಶಃ ವೀರರನ್ನು ಸಮಾಧಿ ಮಾಡಿರಬಹುದೆಂಬ ಸಂಶಯ ಬರುತ್ತದೆ. ಎರಡನೇ ಹಂತದ ಯುದ್ಧ ದೃಶ್ಯದಲ್ಲಿ ಏಕಸಾಲಿನಲ್ಲಿ ಕಾದಾಡುವ ವೀರ ಮತ್ತು ಶತ್ರುಗಳ ನಿರೂಪಣೆಯಿದೆ. ವೀರರಿಬ್ಬರು ಕತ್ತಿ ಮತ್ತು ಈಟಿ(ಬಾಣ)ಗಳನ್ನು ಹಿಡಿದಿದ್ದಾರೆ. ಒಬ್ಬನು ಶತ್ರು ಮುಂದೆ ಚಾಚಿ ಹಿಡಿದ ಬಿಲ್ಲಿಗೆ ಎದುರಾಗಿ ಈಟಿಯನ್ನು ನೆಲಕ್ಕೆ ಇಟ್ಟಿದ್ದಾನೆ. ಅವನ ಪರಿವಾರದವನು ಗುರಾಣಿಯನ್ನು ಹಿಡಿದಿದ್ದಾನೆ. ಸ್ವರ್ಗ ದೃಶ್ಯದಲ್ಲಿ ಮೂವರು ವೀರರನ್ನು ಅಪ್ಸರೆಯರು ಕೈ ಹಿಡಿದು ಹಾರುವ ರೀತಿಯಲಿ ನಿಂತಿದ್ದಾರೆ. ದಂಪತಿಗಳ ಜೊತೆ ಮತ್ತು ಒಬ್ಬನನ್ನು ಪ್ರತ್ಯೇಕವಾಗಿ ಕೆಳಗಿನ ಸಾಲಿನಲ್ಲಿ ಮತ್ತು ಶಿವಲಿಂಗ ಆರಾಧಿಸುವ ಯತಿಗಳಿಬ್ಬರನ್ನು ಮತ್ತು ನಂದಿಯನ್ನು ಮೇಲಿನ ಸಾಲಿನಲ್ಲಿ ತೋರಿಸಲಾಗಿದೆ.[೫೯]

ಶಂಕರನಹಳ್ಳಿಯ ತುರುಗಾಳದ ವೀರಗಲ್ಲಿನ ಯುದ್ಧ ಮತ್ತು ಸ್ವಾರೋಹಣ ದೃಶ್ಯಗಳು ವಿಶೇಷವೆನಿಸಿದೆ. ಯುದ್ಧ ದೃಶ್ಯವನ್ನು ಎರಡು ಸಾಲುಗಳಲ್ಲಿ ಚಿತ್ರಿಸಲಾಗಿದೆ. ಇದರ ಬಲಗಡೆಯ ಅಂಚಿನಲ್ಲಿ ಮೇಲಿಂದ ಕೆಳಕ್ಕೆ ಒಂದೇ ಸಾಲಿನಲ್ಲಿ ಆಕಳು ಫಲಕಗಳಲ್ಲಿ ವೈರಿಗಳ ವಿರುದ್ಧ ಬಿಲ್ಲನ್ನು ಮುಂದೆ ಮಾಡಿ ಬಾಣ ಪ್ರಯೋಗಿಸಲು ತಮ್ಮ ಬಲಗೈಯನ್ನು ಬತ್ತಳಿಕೆಯ ಕಡೆ ಹಿಡಿದಿದ್ದಾರೆ. ಇವರನ್ನು ಒಂದೇ ಎತ್ತರದಲ್ಲಿ ಚಿತ್ರಿಸಲಾಗಿದೆ. ಎಡ ಅಂಚಿನಲ್ಲಿ ಮೇಲಿಂದ ಕೆಳಕ್ಕೆ ತಲಾ ಒಂದು ಫಲಕದಲ್ಲಿ ಇಬ್ಬರು ವೈರಗಳು ಈಟಿ–ಗುರಾಣಿ ಅಥವಾ ಕತ್ತಿ–ಗುರಾಣಿ ಹಿಡಿದು ಕಾದಾಡಲು ನಿಂತಿದ್ದಾರೆ. ಎರಡು ಫಲಕಗಳ ನಡುವೆ ಕಿರು ಅಗಲವಾದ ಅಡ್ಡ ಪಟ್ಟಿಕೆಯಿದೆ. ಹೀಗಾಗಿ ಇಲ್ಲಿ ಮೂವರು ವೀರರು ಯುದ್ಧದಲ್ಲಿ ಮಡಿದರೆಂಬ ಸಂಶಯ ಬರುತ್ತದೆ. ಸ್ವಾರೋಹಣದಲ್ಲಿ ನಡುವೆ ಎರಡು ಅಂತಸ್ತಿನ ಸರಳ ದ್ರಾವಿಡ ಮಾದರಿಯ ವಿಮಾನವಿದ್ದು, ಕೆಳ ಭಾಗದಲ್ಲಿ ಕೈಮುಗಿದು ಇಬ್ಬರು ಕುಳಿತಿದ್ದಾರೆ. ಬಹುಶಃ ದಂಪತಿಗಳಿರಬಹುದು. ಮೇಲಿನ ಹಂತದಲ್ಲಿ ಒಬ್ಬನು ಕುಳಿತಿದ್ದಾನೆ. ವಿಮಾನದ ಕೆಳಹಂತದ ಅರೆಗಂಬಗಳಿಗೆ ಕಟ್ಟಿದ ಹಗ್ಗವನ್ನು ಅಪ್ಸರೆಯರಿಬ್ಬರು ಒಂದು ಕೈಯಲ್ಲಿ ಹಿಡಿದು ಮತ್ತೊಂದು ಕೈಯಲ್ಲಿ ಚೌರಿಯನ್ನಿಡಿದು ಹಾರುತ್ತಿರುವರು. ವಿಮಾನದ ಮೇಲಿನ ಅಂತಸ್ತಿನ ಬದಿಗಳಲ್ಲಿ ವಾದ್ಯಗಾರರಿಬ್ಬರನ್ನು ಮತ್ತು ಕೈಮುಗಿದು ಕುಳಿತ

ವೀರರಿಬ್ಬರನ್ನು ಚಿತ್ರಿಸಿರುವುದು ವಿಶೇಷವೆನಿಸಿದೆ. ಈ ಈರ್ವರ ನಡುವೆ ವಿಮಾನದ ಅಂತದಲ್ಲಿ ಕುಳಿತ ವೀರನು ಸುಮಾರಾಗಿ ಒಂದೇ ಸಾಲಿನಲ್ಲಿರುವರು. ಇವರ ಕುಳಿತ ಬಂಗಿಯಲ್ಲಿ ಬಲಗಡೆಯ ವೀರ, ವಾದ್ಯಗಾರ ಮತ್ತು ವಿಮಾನದ ಅಂತಸ್ತಿನಲ್ಲಿರುವವನು ಒಂದೇ ರೀತಿಯಲ್ಲಿ ಕುಳಿತಿದ್ದಾರೆ. ಸ್ವರ್ಗದೃಶ್ಯದಲ್ಲಿ ಶಿವಲಿಂಗದ ಬಲಕ್ಕೆ ದಂಪತಿಗಳು, ಅದನ್ನು ಪೂಜಿಸುತ್ತ ನಿಂತ ಯತಿ, ಎಡಕ್ಕೆ ಕುಳಿತ ನಂದಿಯಿದೆ. ಯತಿಯು ಗಂಟೆ ಮತ್ತು ಆರತಿಗಳನ್ನು ಹಿಡಿದಿದ್ದಾನೆ. ಮೇಲ್ಗಡೆ ಚಂದ್ರ ಮತ್ತು ಸೂರ್ಯರಿದ್ದಾರೆ. ಕಾಲಮಾನ ಕ್ರಿ.ಶ.ಸುಮಾರು೧೨ನೇ ಶತಮಾನ.[೬೦]

ದೊಡ್ಡಗಟ್ಟದ ಈಶ್ವರ ದೇವಾಲಯವಿದ್ದ ಸ್ಥಳದಲ್ಲಿ ನೆಟ್ಟಿರುವ ವೀರಗಲ್ಲು ತಿಳಿಸುವಂತೆ ದಣ್ಣಯಕನ ಮನೆಯ ಬಲುನಾಯಕ ಮಾರೆಯನಾಯಕ ಮತ್ತು ನಾಗವೇದಿಯ ಮಾರಗೌಡನ, ಮಗ ಮಳೆಯನಾಯಕನು ಸೇರಿ ಅಗ್ಗುಂದದ ಮೇಲೆ ದಂಡೆತ್ತಿ ಹೋಗಿ ಕಾದಿ ಸ್ವರ್ಗಸ್ತರಾಗುತ್ತಾರೆ. ತನ್ನ ಮಳೆಯ ನಾಯಕನ ಹೆಸರಿನಲ್ಲಿ ಬೊಮ್ಮರಸನು ೧೨೮೨ರಲ್ಲಿ ಈ ವೀರಗಲ್ಲನ್ನು ನೆಡಿಸುತ್ತಾನೆ.[೬೧]

### ೩.೪.೩. ಪೆಣ್ಬುಯಲ್

ಪೆಣ್ಬುಯಲ್ ಎಂದರೆ ಹೆಣ್ಣಿನ ಆರ್ತಧ್ವನಿ. ನೆರೆ ರಾಜ್ಯದ ಅಥವಾ ನೆರೆಗ್ರಾಮದ ದಾಳಿಕಾರರು, ಕಳ್ಳರು, ತುರುಗಳನ್ನು ಕದಿಯಲು ಬಂದಾಗ ಕದಿಯುವುದರ ಜೊತೆಗೆ ಆ ಊರಿನ ಸ್ತ್ರೀಯರನ್ನು ಅವಮಾನಗೊಳಿಸುತ್ತಿದ್ದರು. ಕೆಲವು ಸಾರಿ ತುರುಗಳ ಜೊತೆಗೆ ಅವರನ್ನು ಅಪಹರಿಸುತ್ತಿದ್ದರು. ಆಗ ಸ್ತ್ರೀಯರು ತಮ್ಮ ರಕ್ಷಣೆಗಾಗಿ ಪುಯ್ಯಲಿಡುತ್ತಿದ್ದರು. ಅಥವಾ ಹುಯ್ಯಲಿಡುತ್ತಿದ್ದರು. ಎಂದರೆ ಕೂಗಿಕೊಳ್ಳುತ್ತಿದ್ದರು(ಆದ್ದರಿಂದಲೇ ಅದನ್ನು ಪೆಣ್ಬುಯಲ್ ಎಂದು ಕರೆದಿರುವುದು). ಇಂಥ ಪ್ರಸಂಗದಲ್ಲಿ ಅಲಿಪ್ತನಾಗಿರಕೂಡದು ಎಂಬ ಮೌಲ್ಯಕ್ಕೆ ಕಟ್ಟುಬಿದ್ದು ಪ್ರಾಚೀನರು ಸ್ತ್ರೀ ವಿಮೋಚನೆಗೆ ಹೋರಾಡುತ್ತಿದ್ದರು. ಏರಿ ಬಂದ ವೈರಿಗಳು ಹೆಂಡಿರ ಮಾನಹರಣಕ್ಕೆ ಪ್ರಯತ್ನಿಸುತ್ತಿದ್ದುದನ್ನು ವೀರಗಲ್ಲು 'ಪೆಂಡಿರ ಉಡೆಯುರ್ಚುವಲ್ಲಿ' ಎಂದು ಸೊಗಸಾದ ಶಬ್ಧದಿಂದ ಸೂಚಿಸುತ್ತದೆ.[೬೨]

ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಕಿತ್ತನಕೆರೆಯ ಶಾಸನವು ಕಿತ್ತನಕೆರೆಯಿಂದ ಹಾರನಹಳ್ಳಿಗೆ ಅಳಿಯ ಮತ್ತು ಮೂವರು ಹೆಂಗಸರು ಹೋಗುತ್ತಿದ್ದಾಗ ದಾರಿಕಳ್ಳರು ಹೆಂಗಸರ ಉಡೆ ಉರ್ಚಿದಾಗ ಅವರ ಜೊತೆ ಕಾದಿ ಕಳ್ಳರನ್ನು ಸಾಯಿಸಿ, ತಾವು ಸುರಲೋಕ ಪ್ರಾಪ್ತರಾದರೆಂದು ತಿಳಿಸುತ್ತದೆ.[೬೮] ಅಸಂದಿಯ ಗಂಗರ ಸಾಮಂತ ಮುತ್ತರಸನ ವೀರಗಲ್ಲಿನಲ್ಲಿ ನೊಳಂಬರ ಸೈನ್ಯ ತಂಗಿದ್ದಾಗ, ನೊಳಂಬ ಅರಸನು ಒಬ್ಬ ಮಹಿಳೆ ಏಳಬ್ಬೆನಾಯಕಿಯನ್ನು ಮುಟ್ಟಲು ಹೋಗಿ ಅವನು ಕಾದಾಡಿ ಸತ್ತನು ಎಂದು ಹೇಳಲಾಗಿದೆ.[೬೩]

ಕಣಕಟ್ಟೆಯ ಶಾಸನವು ಯುದ್ಧಕ್ಕೆ ಪ್ರೇರಣೆಯಾದ ಸ್ತ್ರೀ ಬಂಧನವನ್ನು ಹೇಳುತ್ತದೆ. ಶತ್ರುಗಳು ಸ್ಥಿರಗಂಭೀರನೊಳಂಬನ ಅಗ್ರಮಹಿಷಿ ಶ್ರೀದೇವಿಯನ್ನು ಮುತ್ತಿ ಬಂಧಿಯಾಗಿಸಿದ್ದನ್ನು ಇದು ಉಲ್ಲೇಖಿಸುತ್ತದೆ.[೬೪]

### ೩.೪.೪. ಊರಳಿವು

ಪ್ರಾಚೀನ ಕಾಲದಲ್ಲಿ ಕಳ್ಳರು ಗೋವುಗಳನ್ನು ಕದ್ದು, ಹೆಣ್ಣು ಮಕ್ಕಳ ಮಾನಭಂಗ ಮಾಡಿ, ಗ್ರಾಮಗಳನ್ನು ಅಥವಾ ಊರುಗಳನ್ನು ನಾಶಪಡಿಸುತ್ತಿದ್ದರು. ಇದೇ ಊರಳಿವು. ಅಥವಾ ಊರಿನ ನಾಶ. ಕಳ್ಳರು ಊರಿಗೆ ನುಗ್ಗಿ ಸಂಪತ್ತನ್ನು ಅಪಹರಿಸಿ, ಊರಿಗೆ ಬೆಂಕಿಯಿಡುತ್ತಿದ್ದರು. ಆ ಕಾಲದಲ್ಲಿ ಹಳ್ಳಿಗಳ ಸಾಮೂಹಿಕ ರಕ್ಷಣೆಗೆ ಸರಿಯಾದ ವ್ಯವಸ್ಥೆ ಇರಲಿಲ್ಲ. ಹೀಗಾಗಿ ನೆರೆಹಳ್ಳಿಯ ದಾಳಿಕಾರರು ಹಾಗಾಗ "ಊರುಗಳನ್ನು ಲೂಟಿ ಮಾಡುತ್ತಿದ್ದರು". "ಊರು ಕೆಟ್ಟು ಸೂರೆಯಾಡುವಾಗ ಆರಿಗಾದರೂ ಇಲ್ಲ" ಎಂಬಂತೆ ಆಗ ಇಡೀ ಗ್ರಾಮವೇ ಚೆಲ್ಲಾಪಿಲ್ಲಿ ಯಾಗುತ್ತಿದ್ದಿತು. ಇಂಥ ಸಮಯದಲ್ಲಿ ಗಟ್ಟಿಯಾಗಿ ನಿಂತು ವೈರಿಗಳನ್ನು ಎದುರಿಸಿ ಉರನ್ನು ರಕ್ಷಿಸುವುದು ಆ ಊರಿನ ವೀರರ ಧ್ಯೇಯವಾಗಿದ್ದಿತು.[೬೫]

ನನ್ನ ಅಧ್ಯಯನದ ಕಣಕಟ್ಟೆಯ ವ್ಯಾಪ್ತಿಯಲ್ಲಿ ಹಲಕೂರಿನ ಒಂದು ಶಾಸನದಲ್ಲಿ ನೀರ್ಗುಂದದ ಊರಳಿವಿನಲ್ಲಿ ಗೋವುಗಳನ್ನು ಹೊತ್ತೊಯ್ಯಲು ಬಂದ ಕಳ್ಳನ ವಿರುದ್ಧ ಕಾದಾಡಿ ಮಾಚಯ್ಯನು ಮಡಿದನೆನ್ನಲಾಗಿದೆ. ನುಗ್ಗಲು ಬಂದವರ ವಿರುದ್ಧ ದಿಡ್ಡಿ ಬಾಗಿಲಲ್ಲೇ ಕಾದಾಡಿದ ಹಲಕೂರ ಮಲ್ಲಗುರುಗಳ ಮಗ ಮಲ್ಲಯ್ಯ ಸಾವನ್ನಪ್ಪಿದನು.[೬೬] ಇದೇ ರೀತಿ ಕಿತ್ತನಕೆರೆ ಮತ್ತು ಬಾಗಡೆಯ ನಡುವೆ ೧೯೩೯ರಲ್ಲಿ ಗಡಿಗಲಾಟೆ ನಡೆಯಿತು. ಇದರಲ್ಲಿ ತಂದೆ ಬಮ್ಮ ಮತ್ತು ಮಗ ಜಕ್ಕ ಕಾದಾಡಿದರು. ಆಗ ಜಕ್ಕ ಸತ್ತನು. ಆಗ ಅವನ ತಂದೆ ಬಮ್ಮ ಮತ್ತು ಅಣ್ಣ ಮಹದೇವ ಅವನ ನೆನಪಿಗಾಗಿ ವೀರಗಲ್ಲನ್ನು[೬೭] ನಿಲ್ಲಿಸಿದ್ದಾರೆ.

### ೩.೪.೫. ಮಹಾಸತಿ ಕಲ್ಲುಗಳು

ಒಬ್ಬ ಪತಿವ್ರತೆಯಾದ ಹೆಂಗಸು ತನ್ನ ಗಂಡನು ಮರಣ ಹೊಂದಿದರೆ, ಸಹಗಮನ ಮಾಡಿದ ಸಂಗತಿಯನ್ನು, ಸೂಚಿಸುವಂತೆ ಆ ಸ್ಥಳದಲ್ಲಿ ನೆಟ್ಟ ಕಲ್ಲಿಗೆ 'ಮಾಸ್ತಿಕಲ್ಲು' ಎಂದು ಹೆಸರು. 'ಮಹಾಸತಿ' 'ಮಾಸ್ತಿ' 'ಮಹಾಸತಿಕಲ್ಲು' ಇವುಗಳೆಲ್ಲ ಅದೇ ಅರ್ಥವನ್ನು ಒಳಗೊಂಡಿವೆ.[೬೮]

ಮಾಸ್ತಿ ಎರಡು ಬಗೆಯಾಗಿದೆ. ೧. ಸಹಗಮನ(ಸಹಮರಣ), ೨. ಅನುಗಮನ (ಅನುಮರಣ) ಗಂಡನ ಶವದೊಂದಿಗೆ ಚಿತೆಯೇರುವುದು ಸಹಗಮನ, ಈ ಪದ್ಧತಿಯ ಉಗಮಕ್ಕೆ ಕಾರಣಗಳನ್ನು ಹುಡುಕಿದರೆ ಭಾರತದಲ್ಲಷ್ಟೇ ಏಕೆ ಸಹಗಮನ ಪ್ರಚಲಿತವಿದ್ದ ಎಲ್ಲ ದೇಶಗಳಲ್ಲೂ ಹಿನ್ನಲೆಯಲ್ಲಿದ್ದ

ಧಾರ್ಮಿಕ ನಂಬಿಕೆ ಒಂದೇ ಆಗಿತ್ತು. ಸತ್ತ ಗಂಡನ ಹಿಂದೆ ಹೆಂಡತಿ ಸತ್ತು ಇನ್ನೊಂದು ಲೋಕದಲ್ಲೂ ಸಹಭಾಗಿನಿಯಾಗಬೇಕೆನ್ನುವುದೇ ಈ ನಂಬಿಕೆಯ ಮುಖ್ಯ ಅಂಶ. ಗಂಡ ದೂರದ ಸ್ಥಳದಲ್ಲಿದ್ದು ಮಡಿದರೆ, ಅವನ ಪ್ರಿಯ ವಸ್ತುವನ್ನು ಹಿಡಿದು ಚಿತೆಯೇರುವುದು ಅನುಗಮನ. ಗಂಡ ಯಾವುದೇ ರೀತಿಯಿಂದ ಸತ್ತಿರಲಿ ಚಿತೆಯೇರಬೇಕೆಂಬುದು ಇಲ್ಲಿಯ ನಿಯತಿ.[೧೯]

ಐದು ಅಥವಾ ಆರನೆಯ ಶತಮಾನದ ಕವಡಿ ಶಾಸನ ಬಹುಶಃ ಕದಂಬ ರವಿವರ್ಮನ ರಾಣಿಯ ಸಹಗಮನವನ್ನು ಸೂಚಿಸುತ್ತಿದ್ದು, ನಮ್ಮ ನಾಡಿನಲ್ಲಿಯ ಈ ಪದ್ಧತಿಯನ್ನು ಕುರಿತ ಪ್ರಥಮ ದಾಖಲೆಯಾಗಿದೆ.[೨೦] ಪಾರಂಪರಿಕ ಸಮಾಜದಲ್ಲಿ ಯುದ್ಧ ಪ್ರಧಾನ ದಿನಗಳಾದ ಅಂದು ಬಹುತೇಕ ರಾಜರು ಮತ್ತು ರಾಜಪರಿವಾರದವರ ಅಧೀನದಲ್ಲಿದ್ದ ಸಾವಿರಾರು ಸಂಖ್ಯೆ ಹೆಣ್ಣುಗಳು ಯಾವ ಕಾರಣಕ್ಕೂ ವಿಮುಕ್ತರಾಗಿ ಬದುಕಲು ಸಾಧ್ಯವಿಲ್ಲ. ಇದನ್ನು ಮನಗಂಡ ಪುರುಷರು ಅದನ್ನು ತಪ್ಪಿಸಿ ಹೆಣ್ಣುಗಳು ಕೇವಲ ತಮ್ಮ ಸುಖಕಷ್ಟೇ ಬಳಕೆಯಾಗುವ ಆಸ್ತಿಯಂತೆ ರೂಪಿಸಿಕೊಳ್ಳಲು ಹೆಣ್ಣಿಗೆ ಮಹಾಸತಿ ಕಲ್ಪನೆಯನ್ನು ರೂಪಿಸಿದರು. ತಮ್ಮ ಮರಣದ ನಂತರ ಚಿತೆಯೇರುವ ಈ ಸತಿಯರು ಮಹಾಸತಿಯರಾಗುತ್ತಾರೆ. ಪರಲೋಕದಲ್ಲಿ ತಮ್ಮ ಗಂಡನನ್ನು ಕೂಡುತ್ತಾರೆ. ಎನ್ನುವ ಪರಲೌಕಿಕ ಕಲ್ಪನೆಯನ್ನು ಮಹಾಸತಿ ಕಲ್ಪನೆಯ ಆಚರಣೆಗಳಲ್ಲಿ ಹೇರಿ ಗಟ್ಟಿಗೊಳಿಸಲಾಯಿತು.[೨೧]

ಚಿತೆಯನ್ನು ಏರುವ ಸ್ತ್ರೀ ಊರ ಒಡೆಯನ ಅಪ್ಪಣೆ ಪಡೆಯಬೇಕಾಗಿತ್ತು. ಸಹಗಮನ ಮಾಡುವ ಸ್ತ್ರೀಯಿಂದ ಅವಳು ಮುಡಿದ ಹೂ, ಹಿಡಿದ ನಿಂಬೆಹಣ್ಣು ಪಡೆದರೆ ಒಳ್ಳೆಯದಾಗುತ್ತದೆ ಎಂಬ ಭಾವನೆ ಹೊಂದಿದ್ದರು. ಗೌರಿವ್ರತವನ್ನು ಆಚರಿಸಿ ಬೆಂಕಿಯ ಜ್ವಾಲೆ ಉಜ್ವಲಗೊಳ್ಳುತ್ತಿದ್ದಂತೆ ಚಿತೆಯನ್ನು ಪ್ರವೇಶಿಸುತ್ತಿದ್ದಳು. ಚಿತೆ ಏರಿದವರ ಹೆಸರಿನಲ್ಲಿ ಸ್ಮಾರಕಗಳನ್ನು ಅವರ ಸಂಬಂಧಿಗಳು ನಿರ್ಮಿಸುತ್ತಿದ್ದರು.[೨೨]

ಪ್ರಸ್ತುತ ಕಣಕಟ್ಟೆ ಹೋಬಳಿಯ ವ್ಯಾಪ್ತಿಯಲ್ಲಿ ಬರುವ ಶಂಕರನಹಳ್ಳಿಯಲ್ಲಿ ಒಂದು ಮಹಾಸತಿ ಶಾಸನ ವಿಶೇಷವಾಗಿದೆ. "ಶ್ರೀದುತು ಸುರಿಗೆಯ ನಯಚನ ಮಗಳು ಬೆಯಕನು ಸಾಯಿಯ ನಾಯಕನ ಮಗ ವೀರಪ್ಪನ ಕೊಡೆ ಕಿಚ್ಚಹಗಲು ಶ್ರೀವೀರದ ಕಂಬ" ಎಂಬ ಶಾಸನ ಪಾಠವು ಸುಮಾರು ೪ ಅಡಿ ಎತ್ತರದ ಕಂಬದ ಮೇಲಿದೆ. ತಲೆ ಭಾಗ ದುಂಡಾಗಿರುವ ಈ ಕಂಬ ಮಾನವಾಕೃತಿಯಂತೆ ನಡುಭಾಗ ಸ್ವಲ್ಪ ಸಣ್ಣದಾಗಿದ್ದು, ಕೆಳ ಮತ್ತು ಮೇಲು ಭಾಗ ದೊಡ್ಡದಾಗಿದೆ. ಕಂಬದ ಮಧ್ಯಭಾಗದಲ್ಲಿ ಚಪ್ಪರದ ಆಕಾರವಿದ್ದು ಅದರಡಿಯಲ್ಲಿ ಕೈಮುಗಿದುಕೊಂಡು ಕುಳಿತಿರುವ ಸತಿಯನ್ನು ಶಿಲ್ಪಿಸಲಾಗಿದೆ. ಗಂಡನೊಡನೆ ಆಕೆ ಚಿತೆಯಲ್ಲಿ ಕುಳಿತು ಸತಿಯಾದಳೆಂದು[೨೩] ತೋರುತ್ತದೆ.

ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿ ಬರುವ ಇನ್ನೊಂದು ಮಹಾಸತಿ ಕಲ್ಲೆಂದರೆ ಜನ್ನಾವರದ ಸೋಮೇಶ್ವರ ದೇವಾಲಯದಲ್ಲಿರುವುದಾಗಿದೆ. ಈ ಮಹಾಸತಿ ಕಲ್ಲು ಸುಮಾರು ಎರಡು ಅಡಿ ಎತ್ತರದಲ್ಲಿದೆ. ಮಹಾಸತಿಯು ತುರುಬನ್ನು ಕಟ್ಟಿಕೊಂಡು ತಲೆಯ ತುಂಬ ಕೆದಿಗೆ ಗರಿಯನ್ನು ಮುಡಿದಿದ್ದಾಳೆ. ಎಡಹಸ್ತವನ್ನು ಕೆಳಗೆ ಇಳಿಬಿಟ್ಟಿದ್ದು, ಬಲಹಸ್ತವನ್ನು ಮೇಲೆತ್ತಿ ಹಿಡಿದಿದ್ದಾಳೆ. ಜೊತೆಗೆ ನಿಂಬೆಹಣ್ಣನ್ನು ಹಿಡಿದಿದ್ದಾಳೆ. ಕೈಯ ಮೇಲ್ಭಾಗದಲ್ಲಿ ಜೋಡಿ ಗಿಳಿಗಳ ಚಿತ್ರಣವಿದೆ. ಮತ್ತು ಈ ಸತಿಯು ವಸ್ತ್ರಾಭರಣಗಳಿಂದ ಅಲಂಕಾರಗೊಂಡಿದ್ದಾಳೆ. ಪ್ರಸ್ತುತ ಈಗ ಈ ಸತಿಕಲ್ಲನ್ನು ಅಲ್ಲಿಯ ಸ್ಥಳೀಯ ಜನರು ಪಾರ್ವತಿದೇವಿ ಎಂದು ಪೂಜೆ ಮಾಡುತ್ತಿದ್ದಾರೆ.

ಸಾತಂಗೆರೆಯ ಸೋಮೇಶ್ವರ ದೇವಾಲಯದ ಆವರಣದಲ್ಲಿ ಸಿಕ್ಕಿರುವ ಮಹಾಸತಿ ಕಲ್ಲಿನಲ್ಲೂ ಈ ಮೇಲಿನ ಲಕ್ಷಣಗಳೇ ಕಂಡುಬರುತ್ತದೆ.

### ೩.೪.೬. ನಿಷಧಿಕಲ್ಲುಗಳು

ಒಂದು ಪ್ರದೇಶದ ಸಂಸ್ಕೃತಿಯ ಪುನರ್ರಚನೆಯಲ್ಲಿ ನಿಷಧಿಕಲ್ಲುಗಳು ಕೂಡ ಪ್ರಮುಖ ಪಾತ್ರವಹಿಸುತ್ತದೆ. ಇವುಗಳು ಜೈನಧರ್ಮದ ವಲಯಕ್ಕೆ ಸಂಬಂಧಿಸಿದ ಸ್ಮಾರಕಗಳಾಗಿದೆ. ನಿಷದಿ ಸಂಪ್ರದಾಯ ಪ್ರಾಚೀನ ಕಾಲದಿಂದಲೂ ನಡೆದು ಬಂದ ಪದ್ಧತಿಯಾಗಿದೆ. ವೀರತನವನ್ನು ಮೆರೆದು ಮಡಿದವರ ಸ್ಮಾರಕವಾಗಿ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದಂತೆ ಮಾನವ ತನ್ನ ಜೀವಿತ ಕಾಲಾವಧಿಯಲ್ಲಿ ಸಲ್ಲೇಖನ ವ್ರತದಿಂದ ಮರಣಹೊಂದಿದ ಸ್ಮರಣೆಗಾಗಿ ನಿಲ್ಲಿಸಿದ ಸ್ಮಾರಕ ಕಲ್ಲುಗಳೇ ನಿಷದಿ ಕಲ್ಲುಗಳು ಎಂದು ಕರೆಯುತ್ತಾರೆ. ಚಿದಾನಂದ ಮೂರ್ತಿಯವರು ಹೇಳುವಂತೆ ಜೈನ ಮುನಿಗಳಲ್ಲದೆ ಸಾಮಾನ್ಯರು ಸಹ ಜೈನ ಧರ್ಮದ ದೀಕ್ಷೆಯನ್ನು ಹೊಂದಿ, ಸನ್ಯಾಸ ವಿಧಿಯಿಂದ ಅಸುನೀಗುತ್ತಿದ್ದರು. ಅಂತಹವರಿಗೂ ನಿಷದಿಕಲ್ಲುಗಳನ್ನು ನಿಲ್ಲಿಸಲಾಗುತ್ತಿತ್ತು. ನಿಷದಿ ಎಂಬ ಪದ ನಿಷತ್ ನಿಂದ ಬಂದಿದೆ. ನಿಷತ್ ಎಂದರೆ ಕುಳಿತಿರುವುದು. ಅಂದರೆ ನಿಷಧಿಕಲ್ಲುಗಳಲ್ಲಿ ಸಲ್ಲೇಖನ ವ್ರತವನ್ನು ಆಚರಿಸುವ ವ್ಯಕ್ತಿ ಗುರುವಿನ ಬಳಿ ಕುಳಿತು ಧರ್ಮ ಶ್ರವಣದಲ್ಲಿ ನಿರತನಾಗಿರುವ ಚಿತ್ರವಿರುತ್ತದೆ. ನಿಷಧಿಯನ್ನು, ನಿಸಿದಿಗೆ, ನಿಶೀದಿಗೆ, ನಿಸಿದಿ, ನಿಶೀದಿಕಾ, ನಿಶಿದಿಗೆ, ನಿಷಿದ್ಯಾಲಯ ಎಂದೂ ಕರೆಯುತ್ತಾರೆ. ನಿಷದಿಕಲ್ಲುಗಳು ಕಂಬಗಳ ಆಕಾರದಲ್ಲಿ. ಫಲಕದ ಆಕಾರದಲ್ಲಿ, ಪಾದಗಳ ಆಕಾರಗಳಲ್ಲಿ, ಊರ ಹೊರಗಿನ ಹೊಲಗಳಲ್ಲಿ, ನೆಟ್ಟ ಕಲ್ಲುಗಳಲ್ಲಿ, ಬಂಡೆಗಳ ಮೇಲೆ ಕಂಡುಬರುತ್ತದೆ.[೭೪]

ಚಿತ್ರವುಳ್ಳ, ಬರವಣಿಗೆಯುಳ್ಳ ನಿಷಧಿ ಶಿಲೆಗಳು ಕಂಡುಬರುತ್ತದೆ. ಜಿನಸೋತ್ರವನ್ನು ಬೋಧಿಸುವ ಗುರು, ಗುರುವಿನ ಮುಂದೆ ಪುಸ್ತಕವನ್ನು ಹೊತ್ತಿರುವ ವ್ಯಾಸಪೀಠ, ಇನ್ನೊಂದು ಕಡೆ ಪಾತ್ರದಾರಿಯಾಗಿ ಜಿನಸ್ತೋತ್ರವನ್ನು ಆಲಿಸುತ್ತಿರುವ ಚಿತ್ರಗಳು ಕಂಡುಬಂದರೆ, ಕೆಲವು ನಿಷಧಿಕಲ್ಲಿನಲ್ಲಿ ಜಿನ

ವಿಗ್ರಹವನ್ನು ಮಾತ್ರ ಕೆತ್ತಿರುತ್ತಾರೆ. ನಿಷಧಿಕಲ್ಲುಗಳಲ್ಲಿ ಗಮನ ಸೆಳೆಯುವ ಅತ್ಯಂತ ಪ್ರಮುಖವಾದಂತಹ ಅಂಶವೆಂದರೆ ಆ ನಿಷಧಿಗಳಲ್ಲಿ ಕಂಡುಬರುವ ಬರವಣಿಗೆಯಾಗಿದೆ. ಇದು ಧರ್ಮ, ಸಮಾಜ, ಸಂಸ್ಕೃತಿ, ಸಾಹಿತ್ಯಗಳಿಗೆ ಸಂಬಂಧಿಸಿದ ಅನೇಕ ಮಾಹಿತಿಗಳನ್ನು ಒದಗಿಸುತ್ತದೆ. ಒಟ್ಟಾರೆ ನಿಷಿಧಿ ಶಾಸನಗಳು, ಜೈನಧರ್ಮದ ತತ್ವ ಮತ್ತು ಆಚರಣೆಗಳು, ವ್ಯವಹಾರಿಕ ಮೂಲಗಳನ್ನು ತಿಳಿಸಿಕೊಡುತ್ತವೆ. ಶಾಸನಗಳು ಜೈನಪರವಾಗಿದ್ದರೆ, ಸಂನ್ಯಾಸಿಗಳ ಹೆಸರಿನ ಹಿಂದೆ ಸಂಘ, ಗಣ, ಗಚ್ಚ, ಅನ್ವಯಗಳ ಉಲ್ಲೇಖ ಕಂಡುಬರುತ್ತದೆ.[೭೫]

ಪ್ರಸ್ತುತ ಅಧ್ಯಯನ ಪ್ರದೇಶದ ಸೋಮಶೆಟ್ಟಿಹಳ್ಳಿಯ ಬಂಡೆಗಲ್ಲಿನ ಮೇಲೆ ಸುಮಾರು ಒಂಬತ್ತು ಹತ್ತನೇ ಶತಮಾನಕ್ಕೆ ಸೇರಿದ ಸ್ತ್ರೀಯರ ನಿಷಿಧಿ ಶಾಸನಗಳು ಇವೆ. ನಲ್ಲೂರ ದೇವಸೇನ ಸಿದ್ಧಾಂತಭಟಾರರ ಶಿಷಿತಿಯ ಶಿಷ್ಯೆ ಪೆಸುವಿರನ್ತಿ ಎಂಬ ಜೈನ ಸ್ತ್ರೀ ಇಲ್ಲಿ ಮಡಿದಿದ್ದಾಳೆ. ಅದೇ ಬಂಡೆಯ ಮೇಲೆ ಚನ್ದಮ್ಮ ಗಾವುಂಡಿಯರ ಪೊನ್ನವ್ವೆ ಎಂಬ ಸ್ತ್ರೀಯ ಹೆಸರಿದೆ. ಈ ಬಂಡೆಯ ಮೇಲೆ ನಿಷಿಧಿ ಶಾಸನಗಳೇ ಇರುವುದರಿಂದ ಈ ಪೊನ್ನವ್ವೆ ಕೂಡ ಜೈನ ಧರ್ಮೀಯಳಾಗಿದ್ದು, ಇಲ್ಲಿ ಮಡಿದಿದ್ದಾಳೆಂದು ತೋರುತ್ತದೆ.[೭೬]

**ಅಡಿಟಿಪ್ಪಣಿಗಳು**

೧. ಗೊರೂರು ಅನಂತರಾಜು, **ಹಾಸನ ಜಿಲ್ಲೆಯ ದೇವಾಲಯಗಳ ದರ್ಶನ,** ಪು.೧

೨. ಅಪರ್ಣ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪು.೧

೩. ರಾಜಾರಾಂ ಹೆಗಡೆ, **ಭಾರತೀಯ ಮೂರ್ತಿಶಾಸ್ತ್ರ, ಧರ್ಮ, ದೇವತಾರಾಧನೆ ಹಾಗೂ ಸಾಂಸ್ಕೃತಿಕ ರಾಜಕೀಯ ಐತಿಹಾಸಿಕ ವಿಶ್ಲೇಷಣೆ,** ಪು.೩೫-೩೬

೪. ಅಪರ್ಣ ಕೂ.ಸ., **ಪೂರ್ವೋಕ್ತ,** ಪು.೧

೫. ಗೋಪಾಲ್ ಬಾ.ರಾ., **ವಾಸ್ತುವಿದ್ಯಾ ಶಿಲ್ಪಶಾಸ್ತ್ರ,** ಪು.೧

೬. ಪ್ರಭಾಕರ್ ಎಂ.ಎಸ್., **ದೇವಾಲಯ ವಾಸ್ತು,** ಪು.೧೨

೭. ರಾಮಚಂದ್ರರಾವ್ ಎಸ್.ಕೆ., **ಭಾರತೀಯ ದೇವಾಲಯಗಳು ನೆಲೆ-ಹಿನ್ನೆಲೆ,** ಪು.೧

೮. ತಿಪ್ಪೇರುದ್ರಸ್ವಾಮಿ ಹೆಚ್., **ಕರ್ನಾಟಕದ ಸಂಸ್ಕೃತಿ ಸಮೀಕ್ಷೆ,** ಪು.೫೨೩

೯. ಸುರೇಶ್ ಬಿ., ಚಿತ್ರದುರ್ಗ, **ದಾವಣಗೆರೆ ಜಿಲ್ಲೆಗಳ ದೇವಾಲಯಗಳು,** ಪು.೪

೧೦. ತಿಪ್ಪೇರುದ್ರಸ್ವಾಮಿ ಹೆಚ್, **ಪೂರ್ವೋಕ್ತ,** ಪು.೫೨೮-೫೩೧

೧೧. ಅದೇ, ಪು.೫೩೭-೫೪೧

೧೨. ಅದೇ, **ಪೂರ್ವೋಕ್ತ,** ಪು.೫೭೭

೧೩. ಸುರೇಶ್ ಕೆ.ಎಂ., ವಾಸುದೇವ ಬಡಿಗೇರ್, ಸೋಮಶೇಖರ್, ಎಸ್.ವೈ., ಮಾಡಲಗೆರೆ ಕೊಟ್ರೇಶ್, **ಕರ್ನಾಟಕ ದೇವಾಲಯಕೋಶ, ಕೊಪ್ಪಳ ಜಿಲ್ಲೆ,** ಪು.೧೮

೧೪. ಜ್ಞಾನಾನಂದ ಜಿ., **ಶಿಲ್ಪಾದರ್ಶ ಸಂ. ೨,** ಪು.೧೯೭-೯೮

೧೫. ಎಪಿಗ್ರಾಫಿಯಾ ಕರ್ನಾಟಿಕ(ಪರಿಷ್ಕೃತ)ಸಂ.೧೦., ಶಾ.ಸಂ.೬೩, ಪು.೯೨-೯೩

೧೬. ಅದೇ, ಶಾ.ಸಂ.೧೧೪, ಪು.೧೪೮-೧೪೯

೧೭. ಅದೇ

೧೮. ಅದೇ, ಶಾ.ಸಂ.೧೧೬, ಪು.೧೫೧-೧೫೨

೧೯. ಅದೇ, ಶಾ.ಸಂ.೭೨, ಪು.೯೬-೯೮

೨೦. ಅದೇ

೨೧. ಗೊರೂರು ಅನಂತರಾಜು, **ಪೂರ್ವೋಕ್ತ,** ಪು.೧೬೩

೨೨. ಅದೇ, ಪು.೧೬೧-೧೬೨

೨೩. ಅದೇ, ಪು.೧೬೧

೨೪. ಎ.ಕ.(ಪರಿಷ್ಕೃತ), **ಪೂರ್ವೋಕ್ತ,** ಶಾ.ಸಂ.೩೨, ಪು.೧೦೩-೧೦೪

೨೫. ಗೊರೂರು ಅನಂತರಾಜು, ಪೂರ್ವೋಕ್ತ, ಪು.೧೬೧

೨೬. ಎ.ಕ.**ಪೂರ್ವೋಕ್ತ,** ಶಾ.ಸಂ.೯೪, ಪು.೧೨೩

೨೭. ಅದೇ, ಶಾ.ಸಂ.೧೨೦, ಪು.೧೫೬-೧೫೮

೨೮. ಅದೇ, ಶಾ.ಸಂ.೧೨೧, ಪು.೧೫೯-೧೬೦

೨೯. ಅದೇ, ಶಾ.ಸಂ.೧೧೩, ಪು.೧೪೨-೧೪೫

೩೦. ತಿಪ್ಪೇರುದ್ರಸ್ವಾಮಿ ಹೆಚ್., **ಪೂರ್ವೋಕ್ತ,** ಪು.೨೨

೩೧. ನಾಗರಾಜಪ್ಪ ಎಸ್., **ಚಿತ್ರದುರ್ಗ ಪರಿಸರದ ದೇವಾಲಯಗಳು** (ಅಪ್ರಕಟಿತ ಎಂ.ಫಿಲ್ **ಪ್ರಬಂಧ**), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ಗೋಪಾಲ್ ಬಾ.ರಾ., **ಪೂರ್ವೋಕ್ತ,** ಪು.೨೦

೩೩. ರಾಜಾರಾಂ ಹೆಗಡೆ, **ಪೂರ್ವೋಕ್ತ,** ಪು.೩೫-೩೬

೩೪. ತಿಪ್ಪೇರುದ್ರಸ್ವಾಮಿ ಹೆಚ್., **ಪೂರ್ವೋಕ್ತ,** ಪು.೬೨೬

೩೫. ಶ್ರೀನಿವಾಸ ಪಾಡಿಗಾರ, **ಭಾರತೀಯ ಇತಿಹಾಸದ ಶಾಸನ ಆಕರಗಳು,** ಪು.೧

೩೬. ಕೃಷ್ಣಮೂರ್ತಿ ಸಿ.ಪಿ., **ಶಾಸನಶಾಸ್ತ್ರ,** ಪು.೨೮-೨೯

೩೭. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.೧೩-೧೭

೩೮. ಭಗವತಿ ಎಸ್.ಎನ್., ಮೇಲಿನಮನಿ ಎಚ್.ಎಸ್., **ಕನ್ನಡ ಶಾಸನಗಳ ಅಧ್ಯಯನ,** ಪು.೧-೦೯

೩೯. ಎ.ಕ.(ಪರಿಷ್ಕೃತ), **ಪೂರ್ವೋಕ್ತ,** ಶಾ.ಸಂ.೯೨, ಪು.೧೨೧-೧೨೨

೪೦. ಅದೇ, ಶಾ.ಸಂ.೧೨೪, ಪು.೧೬೧-೧೬೫

೪೧. ಅದೇ, ಶಾ.ಸಂ.೯೬, ಪು.೧೨೬-೧೩೧

೪೨. ಅದೇ, ಶಾ.ಸಂ.೯೮, ಪು.೧೩೨

೪೩. ಕಲಬುರ್ಗಿ ಎಂ.ಎಂ., **ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು.** ಪು.೩-೪

೪೪. ತಿಪ್ಪೇರುದ್ರಸ್ವಾಮಿ ಹೆಚ್., **ಪೂರ್ವೋಕ್ತ,** ಪು.೨೪೨

೪೫. ಪರಮಶಿವಮೂರ್ತಿ ಡಿ.ವಿ., **ಕನ್ನಡ ಶಾಸನಶಿಲ್ಪ,** ಪು.೭೭

೪೬. ಚಿದಾನಂದಮೂರ್ತಿ ಎಂ., **ಪೂರ್ವೋಕ್ತ,** ಪು.೩೧೨-೩೧೩

೪೭. ಎ.ಕ.(ಪರಿಷ್ಕೃತ), **ಪೂರ್ವೋಕ್ತ,** ಶಾ.ಸಂ.೭೭, ಪು.೧೦೧

೪೮. ಅದೇ, ಶಾ.ಸಂ.ಬೆ.೭೯, ಪು.೧೦೨

೪೯. ಅದೇ, ಶಾ.ಸಂ.೮೦, ಪು.೧೦೨-೧೦೩

೫೦. ಲಲಿತಾಂಬ ಎನ್.ಆರ್., **ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ**

೫೧. ಗೋಪಾಲ್ ಆರ್.(ಸಂ)., **ಹಾಸನ ಜಿಲ್ಲೆಯ ಸ್ಮಾರಕ ಶಿಲ್ಪಗಳು,** ಷಡಕ್ಷರಯ್ಯ ಆರ್.ಎಂ.(ಲೇ)
*ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪು.೩೯೭

೫೨. ಅದೇ, ಪು.೩೯೮

೫೩. ಅದೇ

೫೪. ಅದೇ, ಪು.೪೦೬

೫೫. ಅದೇ, ಪು.೪೦೯

೫೬. ಅದೇ

೫೭. ಅದೇ, ಪು.೪೧೦

೫೮. ಅದೇ, ಪು.೪೧೯

೫೯. ಅದೇ

೬೦. ಅದೇ, ಪು.೪೧೧

೬೧. ಎ.ಕ., **ಪೂರ್ವೋಕ್ತ,** ಶಾ.ಸಂ.೧೨೨, ಪು.೧೬೧

೬೨. ಚಿದಾನಂದಮೂರ್ತಿ ಎಂ., **ಪೂರ್ವೋಕ್ತ,** ಪು.೩೧೫

೬೩. ಲಲಿತಾಂಬ ಎನ್.ಆರ್., **ಪೂರ್ವೋಕ್ತ,** ಪು.೭೫

೬೪. ಗೋಪಾಲ್ ಆರ್.(ಸಂ)., **ಹಾಸನ ಜಿಲ್ಲೆಯ ಸ್ಮಾರಕ ಶಿಲ್ಪಗಳು,** ಷಡಕ್ಷರಯ್ಯ ಆರ್.ಎಂ.(ಲೇ) *ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪು.೩೬೮

೬೫. ಲಲಿತಾಂಬ ಎನ್.ಆರ್., ಪೂರ್ವೋಕ್ತ, ಪು.೭೩

೬೬. ಚಿದಾನಂದಮೂರ್ತಿ ಎಂ., ಪೂರ್ವೋಕ್ತ,, ಪು.೩೧೫–೩೧೬

೬೭. ಗೋಪಾಲ್ ಆರ್.(ಸಂ)., **ಹಾಸನ ಜಿಲ್ಲೆಯ ಸ್ಮಾರಕ ಶಿಲ್ಪಗಳು,** ಷಡಕ್ಷರಯ್ಯ ಆರ್.ಎಂ.(ಲೇ) *ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪು.೩೬೫

೬೮. ಭಗವತಿ ಎಸ್.ಎನ್., ಮೇಲಿನಮನಿ ಎಚ್.ಎಸ್., **ಪೂರ್ವೋಕ್ತ,** ಪು.೧೩೪

೬೯. ಅದೇ, ಪು.೧೩೪

೭೦. ಅದೇ,

೭೧. ಶ್ರೀನಿವಾಸ್, ಎ.ಜಿ., **ನಿಟ್ಟೂರು ಹೋಬಳಿ: ಸಾಂಸ್ಕೃತಿಕ ಅಧ್ಯಯನ** (ಅಪ್ರಕಟಿತ ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ), ಪು.೮೪

೭೨. ಭಗವತಿ ಎಸ್.ಎಸ್., ಮೇಲಿನಮನಿ ಎಚ್.ಎಸ್., ಪೂರ್ವೋಕ್ತ, ಪು.೧೩೬

೭೩. ಗೋಪಾಲ್ ಆರ್.(ಸಂ)., **ಹಾಸನ ಜಿಲ್ಲೆಯ ಸ್ಮಾರಕ ಶಿಲ್ಪಗಳು,** ಷಡಕ್ಷರಯ್ಯ ಆರ್.ಎಂ.(ಲೇ) *ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,* ಪು.೩೯

೭೪. ಚಿದಾನಂದಮೂರ್ತಿ ಎಂ., **ಪೂರ್ವೋಕ್ತ,**, ಪು.೧೦೯

೭೫. ಲಿಂಗಣ್ಣ ಚಿ.ಸಿ., **ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಕೋಶ,** ಪು.೩೨೭

೭೬. ಲಲಿತಾಂಬ ಎನ್.ಆರ್., ಪು.೫೫

# ಅಧ್ಯಾಯ ನಾಲ್ಕು

# ಸಮಾಜ ಮತ್ತು ವ್ಯವಸ್ಥೆ

೪.೧. ಸಾಮಾಜಿಕ ವ್ಯವಸ್ಥೆ

೪.೨. ಧಾರ್ಮಿಕ ವ್ಯವಸ್ಥೆ

೪.೨. ಆರ್ಥಿಕ ವ್ಯವಸ್ಥೆ

ಅಧ್ಯಾಯ ನಾಲ್ಕು

# ಸಮಾಜ ಮತ್ತು ವ್ಯವಸ್ಥೆ

## ೪.೧. ಸಾಮಾಜಿಕ ವ್ಯವಸ್ಥೆ

ಸಾಮಾಜಿಕ ವ್ಯವಸ್ಥೆ ಗತಿಶೀಲವಾದುದು. ಇದು ಸಾಮಾಜಿಕ ಸಂಸ್ಥೆಗಳೆಂಬ ಚಕ್ರದ ಮೇಲೆ ಬರುತ್ತಿರುವ ಗಾಡಿಯಿದ್ದಂತೆ ಒಂದು ಗಾಡಿ ಮುಂದೆ ಸಾಗಲು ಚಕ್ರಗಳು ಮತ್ತು ಉತ್ತಮವಾದ ದಾರಿ ಎಷ್ಟು ಮುಖ್ಯವಾಗಿರುತ್ತದೋ ಒಂದು ಸಮಾಜದಲ್ಲಿ ಆತ್ಮೀಯ ಒಡನಾಟ, ಸಾಮಾಜಿಕ ಸಂಬಂಧ, ಆಧ್ಯಾತ್ಮಿಕತೆ, ಮಾನವೀಯ ಮೌಲ್ಯಗಳು ಮಹತ್ವವಾಗಿರುತ್ತದೆ. ಇವುಗಳ ಮೂಲಕ ಸಂಸ್ಕೃತಿಯನ್ನು ರಕ್ಷಿಸಿ, ಪೋಷಿಸಿ ಶ್ರೀಮಂತಗೊಳಿಸುತ್ತಿರಬೇಕು. ಕರ್ನಾಟಕವನ್ನು ಸುಸಂಗತವಾದ ಸಾಮಾಜಿಕ ಸುವ್ಯವಸ್ಥೆ, ಸಂಪದ್ಭರಿತ ಸಂಸ್ಕೃತಿಯ ತವರೂರನ್ನಾಗಿಸಿದ ಕೀರ್ತಿ ಅಲ್ಲಿ ಆಳಿದ ರಾಜಮನೆತನಗಳಿಗೆ ಸಲ್ಲುತ್ತದೆ.

ಕಣಕಟ್ಟೆ ಹೋಬಳಿ ಪ್ರದೇಶ ಪರಂಪರೆಯಿಂದಲೂ ಅನುಷ್ಠಾನದಲ್ಲಿದ್ದ ವರ್ಣಪದ್ಧತಿಯ ಆಧಾರದ ಮೇಲೆ ನಿಂತಿದೆ. "ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರತ ದ್ವಿಜ ಉಚ್ಯತಾ" ಹುಟ್ಟುವಾಗ ಎಲ್ಲರೂ ಶೂದ್ರರಾಗಿಯೇ ಹುಟ್ಟುತ್ತಾರೆ. ನಂತರ ಜೀವನದಲ್ಲಿ ಸಂಸ್ಕಾರ ಹೊಂದಿರುವವರು ದ್ವಿಜರಾಗುತ್ತಾರೆ.[೧] ಸಂಸ್ಕೃತ ಭಾಷೆಯ ಈ ವಾಕ್ಯದಿಂದ ಹುಟ್ಟಿನಿಂದ ಎಲ್ಲರೂ ಸರಿಸಮಾನರಾಗಿದ್ದಾರೆ. ನಂತರ ಗುಣ ಮತ್ತು ವೃತ್ತಿಗನುಗುಣವಾಗಿ ವಿವಿಧ ವರ್ಗಗಳಾಗುತ್ತದೆ.

ಸಮಸ್ತ ಮಾನವ ಸಮೂಹದ ಸಮಾಜವನ್ನು ೪ ವರ್ಗಗಳಾಗಿ ವಿಂಗಡಿಸಲಾಗಿದೆ. ಇದು ವ್ಯಕ್ತಿಗಳ ಸಾಮಾಜಿಕ ಅಂತಸ್ತು ಮತ್ತು ಅವರು ನಿರ್ವಹಿಸಿದ ಪಾತ್ರಗಳಿಗನುಗುಣವಾಗಿ ನಿರ್ಧರಿಸಲ್ಪಟ್ಟಿದೆ. ಇಂತಹ ವರ್ಗಗಳನ್ನು ವರ್ಣಗಳು ಎಂದು ಕರೆಯುತ್ತಾರೆ. ಪ್ರಾಚೀನ ೪ ವೇದಗಳಲ್ಲಿ ಒಂದಾದ ಋಗ್ವೇದದ ಹತ್ತನೇ ಮಂಡಲವಾದ ಪುರುಷಸೂಕ್ತದಲ್ಲಿ ವರ್ಣಗಳ

ಉಗಮಕ್ಕೆ ಸಂಬಂಧಿಸಿದ ಮಾಹಿತಿ ಇದೆ. ಸೃಷ್ಟಿಕರ್ತನಾದ ಬ್ರಹ್ಮನ ಮುಖದಿಂದ ಬ್ರಾಹ್ಮಣನು, ಭುಜಗಳಿಂದ ಕ್ಷತ್ರಿಯನು, ತೊಡೆಗಳಿಂದ ವೈಶ್ಯನು ಮತ್ತು ಪಾದಗಳಿಂದ ಶೂದ್ರನು ಆವಿರ್ಭವಿಸಿದ್ದಾನೆ[೨] ಎಂದು ಹೇಳಲಾಗಿದೆ. ಧರ್ಮಶಾಸ್ತ್ರಗಳ ಪ್ರಕಾರ ೪ ವರ್ಣಗಳು. ೧. ಬ್ರಾಹ್ಮಣ, ೨. ಕ್ಷತ್ರೀಯ, ೩. ವೈಶ್ಯ, ೪. ಶೂದ್ರ ಎಂದು ವಿಂಗಡಿಸಿದ್ದಾರೆ.

## ಬ್ರಾಹ್ಮಣರು

ಕಣಕಟ್ಟೆ ಹೋಬಳಿ ಪ್ರದೇಶದಲ್ಲಿ ಬ್ರಾಹ್ಮಣರು ಸಮಾಜದಲ್ಲಿ ಇತರ ವರ್ಗಗಳಿಗಿಂತಲೂ ಉನ್ನತವಾದ ಸ್ಥಾನಮಾನವನ್ನು ಪಡೆದುಕೊಂಡಿದ್ದರು. ಬ್ರಾಹ್ಮಣರು ಸಮಾಜದಲ್ಲಿ ಗೌರವ ಮತ್ತು ಪೂಜನೀಯ ಸ್ಥಾನವನ್ನು ಹೊಂದಿದ್ದರು. ಇವರು ಷಟ್ಕರ್ಮ ನಿರತರಾಗಿದ್ದು, ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ ಮತ್ತು ಪರಿಗ್ರಹ ಇವೇ ಷಟ್ಕರ್ಮಗಳಾಗಿದ್ದವು. ಇವುಗಳನ್ನು ಕಟ್ಟುನಿಟ್ಟಿನಿಂದ ಆಚರಿಸುತ್ತಿದ್ದರು. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಕಾಲದಲ್ಲಿ ರಾಜರು, ಅಧಿಕಾರಿಗಳು, ಶ್ರೀಮಂತರು ಬ್ರಾಹ್ಮಣರಿಗೆ ಭೂಮಿಯನ್ನು ದಾನ ನೀಡಿದರ ಬಗ್ಗೆ ಶಾಸನಗಳು ತಿಳಿಸುತ್ತದೆ. ಇಮ್ಮಡಿ ನರಸಿಂಹನ ಕಾಲದಲ್ಲಿ ಕಣಕಟ್ಟೆಯನ್ನು ಅಗ್ರಹಾರವಾಗಿ ಪರಿವರ್ತಿಸಲಾಯಿತು.[೩] ೧೧೪೩ರಲ್ಲೇ ಆಳ್ವಿಭಟ್ಟನೆಂಬ ಮಹಾಪಂಡಿತನಾದ ಶಿಷ್ಟ ಬ್ರಾಹ್ಮಣನು ಕಲಿಗೇಶ್ವರ ದೇವಾಲಯ ನಿರ್ಮಿಸಿ ದೇವರ ಭೂಮಿಗೆ ನೀರೊದಗುವಂತೆ ಹೊಸ ತೂಬನ್ನು ಮಾಡಿಸಿ ಸಾಮಂತ ಗೋಪಾಲದೇವನಿಂದ ದಾನದತ್ತಿಗಳನ್ನು ದೇವಾಲಯಕ್ಕೆ ಬಿಡಿಸಿದ ಉಲ್ಲೇಖವಿದೆ.[೪]

ಇಮ್ಮಡಿ ವೀರಬಲ್ಲಾಳನು ಯುವರಾಜನಾಗಿದ್ದಾಗಲೇ ಬಲ್ಲಾಳಪುರವೆಂಬ ಹೆಸರಿನಲ್ಲಿ ಕಿತ್ತನಕೆರೆಯನ್ನು ೧೨೦ ಬ್ರಾಹ್ಮಣರಿಗೆ ಸೇರುವಂತೆ ಅಗ್ರಹಾರವಾಗಿ ಮಾಡಿದ್ದಾನೆ.[೫] ನಾಗವೇದಿಯನ್ನು ಮೈಜೀವಿತಕ್ಕೆ ಪಡೆದ ಬಲ್ಲಾಳನು ಅಧಿಕಾರಿ ಮಾಸಯ್ಯ ಅಗ್ರಹಾರ ಮಾಡಿ ಚಕ್ರವರ್ತಿಯ ಕೈಯಿಂದ ಧಾರೆಯನ್ನೆರಸಿ ಕೊಟ್ಟಿದ್ದಾನೆ.[೬] ಬ್ರಾಹ್ಮಣರು ತಮ್ಮ ಕೌಶಲ್ಯ ಹಾಗೂ ನೈಪುಣ್ಯತೆಗಳಿಂದ (ಪಾಂಡಿತ್ಯ) ಹಿಂದಿನಿಂದಲೂ ಗುರುಗಳಂತೆ, ಪುರೋಹಿತರಂತೆ ಕಾಣಿಸಿಕೊಳ್ಳುತ್ತಿದ್ದರು. ಇವರು ಸಮಾಜ ಮತ್ತು ದೇವಾಲಯಗಳಿಗೆ ತಮ್ಮ ಸೇವೆಯನ್ನು ಮೀಸಲಿರಿಸಿಕೊಂಡು ಜನರಿಂದ, ರಾಜನಿಂದ, ಸಾಮಂತರಿಂದ ಪಡೆದ ದಾನಗಳು, ಕಾಣಿಕೆಗಳಿಂದಲೇ ಜೀವನ ಸಾಗಿಸುತ್ತಿದ್ದರು. ಇವರು ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಎಷ್ಟು ಪ್ರಬಲವರ್ಗದವರಾಗಿದ್ದರೆಂದು ಇವರಿಗೆ ನೀಡಿರುವ ಅಗ್ರಹಾರಗಳ ದಾನಗಳಿಂದಲೇ ತಿಳಿಯಬಹುದಾಗಿದೆ. ಇವರು ನಿರ್ವಿಕಾರ ಭಾವನೆಯಿಂದ ನಿಷ್ಕಲ್ಮಶ ಮನೋಭಾವದಿಂದ ಲೌಕಿಕ ವಿದ್ಯೆಯಲ್ಲಿ ಸೇರಿರುವ ನ್ಯಾಯ, ಸಾಹಿತ್ಯ, ಖಗೋಳಶಾಸ್ತ್ರ, ವೈದ್ಯ, ರಾಜನೀತಿ, ಕುಶಲತೆ ಮೊದಲಾದವುಗಳನ್ನು ಅಭ್ಯಾಸ ಮಾಡುತ್ತಿದ್ದರು.

ಇದರಲ್ಲಿ ಸಮರ್ಥರಾದವರನ್ನು ತಮ್ಮ ಆಡಳಿತದಲ್ಲಿಯೂ ನೇಮಿಸಿಕೊಳ್ಳುತ್ತಿದ್ದರು. ಜಗತ್ತಿಗೆ ಶಾಂತಿ ಸಂದೇಶ ಸಾರುತ್ತ ಸರ್ವರ ಶ್ರೇಯಸ್ಸನ್ನು ಕೋರುವುದು, ವೇದಗಳನ್ನು ಅಧ್ಯಯನ ಮಾಡಿ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಾ, ನೀತಿ-ನಿಯಮಗಳನ್ನು ಕಾಪಾಡಿಕೊಂಡು, ಆಗಾಗ್ಗೆ ಉಪವಾಸ ಮಾಡುತ್ತಿದ್ದರು. ದಾನವನ್ನು ಸ್ವೀಕರಿಸಿ, ಮನೋನಿಗ್ರಹ, ಇಂದ್ರಿಯನಿಗ್ರಹ, ತಪಸ್ಸು, ತೀರ್ಥಯಾತ್ರೆ, ಶಾಂತಿ, ಪರಿಶುದ್ಧತೆ, ಭಕ್ತಿ, ವಿಶ್ವಾಸ, ಕ್ಷಮೆಗಳೇ ಬ್ರಾಹ್ಮಣರ ಧರ್ಮಗಳಾಗಿದ್ದವು. ಪ್ರಸ್ತುತವಾಗಿ ಈ ಪ್ರದೇಶದಲ್ಲಿ ಬ್ರಾಹ್ಮಣ ವರ್ಗದ ಸಂಖ್ಯೆ ಅತೀ ಕಡಿಮೆಯಾಗಿದ್ದು, ಒಂದು ಗ್ರಾಮಕ್ಕೆ ಒಂದು ಎರಡು ಮನೆಗಳು ಮಾತ್ರ ಬ್ರಾಹ್ಮಣ ವರ್ಗಕ್ಕೆ ಸೇರಿದವಾಗಿರುತ್ತದೆ.

### ಕ್ಷತ್ರಿಯರು

ಸಾಮಾಜಿಕ ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣರ ನಂತರದ ಸ್ಥಾನವನ್ನು ಕ್ಷತ್ರಿಯರು ಹೊಂದಿದ್ದರು. ಇವರು ಬ್ರಹ್ಮನ ಭುಜಗಳಿಂದ ಜನಿಸಿದವರೆಂದು ತಿಳಿಯಲಾಗಿದೆ. ಅಂದಿನ ಸಮಾಜದಲ್ಲಿ ಸರ್ವೋತ್ತಮ ರೆನಿಸಿದ ಬ್ರಾಹ್ಮಣರು, ಕ್ಷತ್ರಿಯರನ್ನು ಆರ್ಥಿಕವಾಗಿ ಅವಲಂಬಿಸಿದ್ದರೆ, ಕ್ಷತ್ರಿಯರು ತಮ್ಮ ಪುಣ್ಯಾರ್ಜನೆಯ ವೈದಿಕ ಆಚರಣೆಗಳಿಗಾಗಿ ಬ್ರಾಹ್ಮಣರನ್ನು ಅವಲಂಬಿಸಿದ್ದರು. ಇವರು ಧೈರ್ಯ, ಸಾಹಸ, ತೇಜಸ್ಸು ಗುಣಗಳಿಗೆ ಪ್ರಸಿದ್ಧಿಯಾಗಿದ್ದರು. ಭುಜ ಬಲದ ಪರಾಕ್ರಮಗಳಿಗೆ ಸುಪ್ರಸಿದ್ಧರಾದವರು. ತಮ್ಮ ಶಕ್ತಿ ಸಾಮರ್ಥ್ಯಗಳಿಂದ ಸಮಾಜವನ್ನು ರಕ್ಷಿಸಿ ಎಲ್ಲೆಯನ್ನು ವಿಸ್ತರಿಸಿಕೊಳ್ಳುತ್ತಾ ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಹೋರಾಟ ಮಾಡುವುದು, 'ಸತ್ತರೆ ಸ್ವರ್ಗ, ಗೆದ್ದರೆ ರಾಜ್ಯ' ಎಂಬ ವೀರ ಉಕ್ತಿಯಂತೆ ನಡೆಯುವವರೇ ಕ್ಷತ್ರಿಯರಾಗಿದ್ದರು. ಇವರು ಅಂದಿನ ಸೇವೆಗಳ ಬೆನ್ನೆಲುಬಾಗಿದ್ದರು. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವುದು, ಅಶಕ್ತರಿಗೆ ಆಶ್ರಯವನ್ನು ನೀಡುವುದು, ಕಷ್ಟ ಸಹಿಷ್ಣುತೆಗಳಲ್ಲಿ ಭಾಗಿಯಾಗುವುದು, ಕ್ಷತ್ರಿಯರ ಮಾನವೀಯ ಅಂಶಗಳಾಗಿದ್ದವು. ಸಾಮ್ರಾಜ್ಯ ನಿರ್ಮಾಣ ಹಾಗೂ ಅದರ ರಕ್ಷಣಾ ವ್ಯವಸ್ಥೆಯ ಹೊಣೆ ಹೊತ್ತ ಈ ವರ್ಗ ಯುದ್ಧವನ್ನು ರಾಜ್ಯಾಡಳಿತದ ಒಂದು ಅವಿಭಾಜ್ಯ ಅಂಗವಾಗಿ ಮಾಡಿ ಕೊಂಡಿರುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕ್ಷತ್ರೀಯ ಎಂಬುದು ಒಂದು ಆಳುವ ವರ್ಗವಾಗಿತ್ತು.

### ವೈಶ್ಯರು

ವೈಶ್ಯರು ಸಮಾಜದ ವರ್ಣ ವ್ಯವಸ್ಥೆಯಲ್ಲಿ ಮೂರನೇ ಸ್ಥಾನವನ್ನು ಪಡೆದಿದ್ದಾರೆ. ಇವರು ಬ್ರಹ್ಮನ ತೊಡೆಗಳಿಂದ ಜನಿಸಿದವರು ಎಂದು ಋಗ್ವೇದ ತಿಳಿಸುತ್ತದೆ. ವೈಶ್ಯರು ವರ್ತಕರು ಅಥವಾ ವ್ಯಾಪಾರಿಗಳಾಗಿದ್ದುಕೊಂಡು, ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸಿದ್ದರು. ವ್ಯಾಪಾರವೇ ಇವರ ಪ್ರಮುಖ ವೃತ್ತಿಯಾಗಿದ್ದು, ಇವರನ್ನು ಶೆಟ್ಟಿಗಳು ಎಂದು ಕರೆಯುತ್ತಾರೆ. ಕಣಕಟ್ಟೆಯು

ಮಗರೆ ಮುನ್ನೂರರ ಪ್ರಮುಖ ವ್ಯಾಪಾರೀ ಕೇಂದ್ರವಾಗಿತ್ತು. ಅಲ್ಲದೇ ಸರಕು ಸಾಗಾಣಿಕೆ ಮಾಡುವುದು ಮತ್ತು ಉತ್ತರದಿಂದ ದೋರಸಮುದ್ರದತ್ತ ಸಾಗಿ ಬರಬಹುದಾದ ಸೈನ್ಯಗಳಿಗೆ ಮುಖ್ಯ ಪಥವೂ ಆಗಿತ್ತು.[೭]

೧೨೨೭ರ ಶಾಸನಗಳು ಕಣಕಟ್ಟೆಯನ್ನು ವಿಜಯನಾರಸಿಂಹಪುರವೆಂದು ಕರೆದಿವೆ.[೮] ಅಲ್ಲಿಂದ ಮುಂದೆ ನಡೆಯುವ ಎಲ್ಲ ಚಟುವಟಿಕೆಗಳು ಅಲ್ಲಿನ ೧೨೦ ಮಹಾಜನರ ನೇತೃತ್ವದಲ್ಲಿ ಜಗತಿಕೊತ್ತಳಿಗಳ ನೇತೃತ್ವದಲ್ಲಿ ಕಣಕಟ್ಟೆಯ ಪಟ್ಟಣಸ್ವಾಮಿಗಳು, ವಡ್ಡ ವ್ಯವಹಾರಿಗಳ ಸಮಕ್ಷಮದಲ್ಲಿ ನಡೆದುಕೊಂಡು ಹೋಗುತ್ತಿತ್ತು.[೯] ಕಣಕಟ್ಟೆಯ ಇಲ್ಲಿನ ಆಡಳಿತ ವರ್ಗ, ಪುರೋಹಿತ ವರ್ಗದ ಪ್ರಭುತ್ವದ ಜೊತೆಗೆ ಅತ್ಯಂತ ಚಟುವಟಿಕೆಯಿಂದ ಕೂಡಿದ್ದ ವ್ಯಾಪಾರಿ ವರ್ಗದವರು ಹಾಗೂ ಉತ್ಪಾದನಾ ವರ್ಗದವರಾದ ಜಗತಿ ಕೊತ್ತಳಿಗಳು, ಜೇಡ ಕೊತ್ತಳಿಗಳು, ಎಕ್ಕಟಿಗರು, ತೈಲಿಗರು ಮುಂತಾದವರು ಸಂಘಟಿತರಾಗಿ ತಮ್ಮ ತಮ್ಮ ಸಂಘಗಳ ಮೂಲಕ ಅನೇಕ ಧರ್ಮಕಾರ್ಯಗಳನ್ನು ಮಾಡುತ್ತ, ತಮ್ಮ ವೃತ್ತಿಯನ್ನು ಅಭಿವೃದ್ಧಿಪಡಿಸಿಕೊಂಡು ಕಣಕಟ್ಟೆಯನ್ನು ಪ್ರಮುಖ ಪಟ್ಟಣ ಮಾಡಿದ್ದರು.

ಇಲ್ಲಿ ತೆಲ್ಲಿಗರ ಸಂಘದ ಎಂಟು ಪ್ರಮುಖ ತೈಲಿಗರು ಕಲಿಗೇಶ್ವರ ದೇವರಿಗೆ ನಂದಾದೀವಿಗೆಗೆ ತಮ್ಮ ತೈಲದ ಕೊಡಗಳಿಗೆ ಸೊಂಟಗೆ ಒಂದರಂತೆ ದಾನಬಿಟ್ಟಿದ್ದಾರೆ. ಅಲ್ಲದೇ ದೇವಾಲಯ ಕೆಲಸಕ್ಕೆ ವರುಷಕ್ಕೆ ಒಂದು ಗಾಣದಲ್ಲೆ ಒಂದು ಹಣದಂತೆ ದೇವರಿಗೆ ದಾನಬಿಟ್ಟಿದ್ದಾರೆ.[೧೦] ಅಂದರೆ ಪ್ರಮುಖ ತೈಲೋಧ್ಯಮಿಗಳು ಅನೇಕ ಗಾಣಗಳ ಒಡೆಯರಾಗಿರುತ್ತಿದ್ದರು ಮತ್ತು ಕೊಡಗಟ್ಟಲೇ ತೈಲ ಉತ್ಪಾದನೆ ಮಾಡುತ್ತಿದ್ದರೆಂಬುದು ಅರ್ಥವಾಗುತ್ತದೆ. ಗಾಣಗಳಲ್ಲಿ ಕಲ್ಲುಗಾಣ, ಮರದ ಗಾಣಗಳ ಉಲ್ಲೇಖವಿದೆ.[೧೧] ತೆಲ್ಲಿಗರು ಆರ್ಥಿಕ ಪ್ರಗತಿಯೊಂದಿಗೆ ಸಾಮಾಜಿಕ ಸ್ಥಾನಮಾನವನ್ನು ಗಳಿಸಿದ್ದರು. ಮಾರಿಸೆಟ್ಟಿ ಎಂಬ ತೈಲಿಗಕುಲದ ವ್ಯಾಪಾರಿ ಜನ್ನಾವರ ಗ್ರಾಮದ ಗೌಡಿಕೆಯನ್ನು ಹೊಂದಿದ್ದನು. ಆತ ತನ್ನ ಮಗ ತೈಲಿಸೆಟ್ಟಿಯ ಹೆಸರಿನಲ್ಲಿ ತೈಲೇಶ್ವರ ದೇವಾಲಯ ನಿರ್ಮಿಸಿದ್ದಾನೆ. ಅನೇಕ ಭೂದಾನ ನೀಡಿದ್ದಾನೆ.[೧೨] ಕಣಕಟ್ಟೆ ಶಂಕರನಹಳ್ಳಿ, ಸೋಮಶೆಟ್ಟಿಹಳ್ಳಿ ಗ್ರಾಮಗಳಲ್ಲಿ ಶೆಟ್ಟಿಗಳು ಮತ್ತು ಅವರ ಸಂಘ ಅಥವಾ ಕೊತ್ತಳಿಗಳು ಕೆರೆ ನಿರ್ಮಾಣ, ನಿರ್ವಹಣೆಗೆ ವಿಶೇಷ ಗಮನ ನೀಡಿದ್ದಾರೆ.[೧೩] ಕಣಕಟ್ಟೆಯಲ್ಲಿ ಎಲ್ಲಾ ಜಗತಿ, ಕೊತ್ತಳಿಗಳು ಸೇರಿ ಕೆರೆ ನಿರ್ಮಿಸಿದ್ದಾರೆ.[೧೪] ಪ್ರಸ್ತುತವಾಗಿ ಈಗಲು ಸಹ ಈ ಪ್ರದೇಶದಲ್ಲಿ ಹೆಚ್ಚು ವೈಶ್ಯರು ಅಂದರೆ ವ್ಯಾಪಾರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಇದ್ದು, ಇವರಲ್ಲಿ ಗಾಣಿಗರು, ಬಣಜಿಗ ಶೆಟ್ಟರು ಪ್ರಮುಖರಾಗಿದ್ದಾರೆ.

### ಶೂದ್ರರು

ಸಮಾಜದಲ್ಲಿ ಕಂಡುಬರುವ ನಾಲ್ಕನೇ ವರ್ಗವೇ ಶೂದ್ರರಾಗಿದ್ದರು. ಇದು ಬಹುದೊಡ್ಡದಾದ ಗುಂಪಾಗಿತ್ತು. ವರ್ಣಗಳಲ್ಲೇ ಶ್ರೇಷ್ಠರೆಂದು ಗುರುತಿಸಿಕೊಂಡಿದ್ದ ಬ್ರಾಹ್ಮಣವರ್ಗ, ಸಮಾಜದ ಆಳ್ವಿಕೆಯ ಸೂತ್ರವನ್ನೆ ಕೈಯಲ್ಲಿ ಹಿಡಿದ ಕ್ಷತ್ರಿಯರೆಂದು ಕರೆದುಕೊಳ್ಳುತ್ತಿದ್ದಂತಹ ಮತ್ತು ವೈಶ್ಯರೆಂದು ಕರೆದುಕೊಳ್ಳುತ್ತಿದ್ದ ವ್ಯಾಪಾರ ವರ್ಗಗಳನ್ನು ಬಿಟ್ಟರೆ ಉಳಿದ ಎಲ್ಲಾ ಜಾತಿಗಳನ್ನು ಶೂದ್ರರು ಎಂದು ಕರೆಯುತ್ತಾರೆ. ಉದಾಹರಣೆಗೆ ಅಕ್ಕಸಾಲಿಗರು, ಮಡಿವಾಳರು, ಕುಂಬಾರರು, ಕಮ್ಮಾರ, ಬಡಗಿಗಳು, ಭಜಂತ್ರಿ, ಚರ್ಮಗಾರ, ನೇಕಾರ ಮುಂತಾದವರನ್ನು ಶೂದ್ರರೆನ್ನುತ್ತಿದ್ದರು. ಶೂದ್ರರು ಸಾಮಾಜಿಕವಾಗಿ ಕೆಳಸ್ತರದಲ್ಲಿದ್ದು ಉಳಿದ ವರ್ಣದವರು ಪಡೆಯುತ್ತಿದ್ದ ಅನೇಕ ಸೌಲಭ್ಯಗಳಿಂದ ವಂಚಿತರಾಗಿದ್ದರಲ್ಲದೆ ಮೇಲಿನ ಮೂರು ವರ್ಣದವರು ಮಾಡದೇ ಬಿಟ್ಟ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ಇವರು ಇನ್ನೊಬ್ಬರ ಆಶ್ರಯದಲ್ಲೇ ಇದ್ದುದರಿಂದ ಸ್ವತಂತ್ರವಾದ ಆಸ್ತಿ ಅಂತಸ್ತು ಇಲ್ಲದೆ ಬಡವರಾಗಿದ್ದರು. ಆದರೂ ಕೂಡ ತಮ್ಮ ಕೆಲಸವನ್ನು ಕೀಳೆಂದು ಪರಿಗಣಿಸಿರಲಿಲ್ಲ. ಇವರಿಗೆ ವೇದಗಳನ್ನು ಓದುವುದಕ್ಕಾಗಲೀ, ಯಜ್ಞಯಾಗಗಳಲ್ಲಿ ಪಾಲ್ಗೊಳ್ಳುವು ದಕ್ಕಾಗಲೀ ಅನುಮತಿ ಇರಲಿಲ್ಲ. ಹೀಗೆ ಮೂರು ವರ್ಗದವರ ಅಂದರೆ ಉಚ್ಚ ವರ್ಗದವರ ಸೇವೆಯನ್ನು ಮಾಡಿ ತಮ್ಮ ಮುಕ್ತಿ ಸಾಧಿಸಿ ಅಂತರಂಗ ಬಹಿರಂಗಗಳ ಶುದ್ಧಿ ಶೂದ್ರನನ್ನು ದೇವರಿಗೂ, ಬ್ರಾಹ್ಮಣರಿಗೂ ಸಲ್ಲಿಸಬೇಕಾದ ಕರ್ತವ್ಯಗಳನ್ನು ನೆರವೇರಿಸಿ ತಮ್ಮ ತಪಶ್ಚರ್ಯ ಜೀವನವನ್ನು ನಡೆಸಲು ಅರ್ಹನನ್ನಾಗಿ ಮಾಡುತ್ತದೆಯೆಂದು ಜೈನ ಕೃತಿಕಾರನಾದ ಸೋಮದೇವ ತನ್ನ ನೀತಿವಾಕ್ಯದಲ್ಲಿ ತಿಳಿಸಿದ್ದಾನೆ.[೧೫] ಈಗ ವರ್ಣವ್ಯವಸ್ಥೆಯಲ್ಲಿ ಶೂದ್ರರನ್ನು ಕೀಳಾಗಿ ಕಾಣುವ, ಕೀಳಾಗಿ ನಡೆಸಿಕೊಳ್ಳುವುದರಲ್ಲಿ ಹಿಂದಿನ ಕಾಠಿಣ್ಯತೆ ಇಲ್ಲದಿದ್ದರೂ, ಇದು ಸಂಪೂರ್ಣವಾಗಿ ನಾಶವಾಗಿ ಎಲ್ಲರೂ ಒಂದೇ ಎಂಬ ದೃಷ್ಟಿಯಲ್ಲಿ ಸಮಾಜವು ಬೆಳವಣಿಗೆಯಾಗಿದೆ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಕೆಲವು ಕಡೆ ಶೂದ್ರರನ್ನು ಈಗಲೂ ಸಹ ಅಸ್ಪೃಶ್ಯರೆಂದೇ ಪರಿಗಣಿಸುವುದನ್ನು ಕಾಣುತ್ತೇವೆ. ಹೀಗೆ ಸಾಮಾಜಿಕ ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಸ್ಥಿತಿಗತಿಗಳನ್ನು ಕರ್ತವ್ಯಗಳನ್ನು ಕಾಣಬಹುದು. ಈ ೪ ವರ್ಣಗಳ ಮೂಲ ಏನೇ ಇದ್ದರೂ ಅಂದಿನ ಸಮಾಜದಲ್ಲಿಯೂ ಮತ್ತು ಇಂದಿನ ಸಮಾಜದಲ್ಲಿಯೂ ಕಂಡುಬರುವ ಅಸಮಾನತೆಯನ್ನು ತಿಳಿಯಬಹುದಾಗಿದೆ.

### ಕುಟುಂಬ ವ್ಯವಸ್ಥೆ

ಯಾವುದೇ ಒಂದು ಪ್ರದೇಶದಲ್ಲಿನ ಸಾಮಾಜಿಕ ಸ್ಥಿತಿಗತಿ ಅಥವಾ ವ್ಯವಸ್ಥೆಯನ್ನು ತಿಳಿಯಬೇಕಾದರೆ, ಅಲ್ಲಿನ ಕುಟುಂಬ ವ್ಯವಸ್ಥೆಯನ್ನು ತಿಳಿಯಬೇಕಾಗುತ್ತದೆ. ಪ್ರಸ್ತುತ ಅಧ್ಯಯನ

ಕೈಗೊಂಡಿರುವ ಪ್ರದೇಶದಲ್ಲಿ ಅವಿಭಕ್ತ ಕುಟುಂಬ ಪದ್ಧತಿ ಇತ್ತು. ಅಂದು ಈ ಸಮಾಜ ಪುರುಷ ಪ್ರಧಾನವಾದ ಸಮಾಜವಾಗಿತ್ತು. ಕುಟುಂಬದ ಎಲ್ಲಾ ಸದಸ್ಯರು ಒಂದೇ ಮನೆಯಲ್ಲಿ ವಾಸಿಸುತ್ತಾ ಒಂದೇ ಒಲೆಯಲ್ಲಿ ತಯಾರಿಸಿದ ಆಹಾರವನ್ನು ಸ್ವೀಕರಿಸುತ್ತಾ ಕುಟುಂಬದ ಆಸ್ತಿಯ ಸಾಮಾಜಿಕ ಸಾಮ್ಯತೆಯನ್ನು ಹೊಂದಿ ದೇವರ ಪೂಜೆಯಲ್ಲಿ ಎಲ್ಲರೂ ಭಾಗವಹಿಸುವ ರಕ್ತ ಸಂಬಂಧಿಗಳ ಸಮೂಹಕ್ಕೆ ಅವಿಭಕ್ತ ಕುಟುಂಬ ಎನ್ನುತ್ತಾರೆ. ಇಂತಹ ಕುಟುಂಬ ವ್ಯವಸ್ಥೆಯಲ್ಲಿ ತಂದೆ, ತಾಯಿ, ಸಹೋದರರು, ಅವರ ಪತ್ನಿಯರು, ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳು, ವಿವಾಹವಾಗುವವರೆಗೆ ಕುಟುಂಬದ ಹೆಣ್ಣುಮಕ್ಕಳು ಹೀಗೆ ಮೂರು ಇಲ್ಲವೇ ೪ ತಲೆಮಾರಿನ ಜನರು ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು. ಪುರುಷ ಪ್ರಧಾನ ಪಾತ್ರವಹಿಸುತ್ತಿದ್ದನು. ಕುಟುಂಬದಲ್ಲಿ ಹಿರಿಯ ಪುರುಷನೇ ಮನೆಯ ಯಜಮಾನನಾಗಿರುತ್ತಿದ್ದನು. ಕುಟುಂಬದ ಸರ್ವಸದಸ್ಯರನ್ನು ಸಾಕುವುದು ಯಜಮಾನನ ಕರ್ತವ್ಯವಾಗಿತ್ತು. ಕುಟುಂಬದ ಹಿರಿಯರಿಗೆ ಎಲ್ಲರೂ ಗೌರವವನ್ನು ತೋರಿಸುತ್ತಾ ನಡೆಯುತ್ತಿದ್ದರು. ಹಿರಿಯರು ಕಿರಿಯರಿಗೆ ಅಷ್ಟೇ ಪ್ರೀತಿ ವಾತ್ಸಲ್ಯ ತೋರಿಸುತ್ತಿದ್ದರು. ಪ್ರಸ್ತುತವಾಗಿ ಈಗಲೂ ಅವಿಭಕ್ತ ಕುಟುಂಬಗಳು ಕಂಡುಬಂದರೂ ಅವುಗಳು ಹೆಚ್ಚಿನ ಸಂಖ್ಯೆಯಲ್ಲಿಲ್ಲ. ಹೆಚ್ಚಾಗಿ ವಿಭಕ್ತ ಕುಟುಂಬಗಳೇ ಕಂಡುಬರುತ್ತವೆ. ಒಂದು ಮನೆಯಲ್ಲಿ ಗಂಡ-ಹೆಂಡತಿ ಮತ್ತು ಅವರ ಮಕ್ಕಳು ಇಷ್ಟು ಜನರು ಇರುವ ಕುಟುಂಬಗಳನ್ನು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ಕಾಣುತ್ತೇವೆ.

## ಸ್ತ್ರೀಯರ ಸ್ಥಾನಮಾನ

ಹಿಂದೂ ಸಮಾಜದ ಸಾಮಾಜಿಕ ವ್ಯವಸ್ಥೆ ವೈವಿಧ್ಯತೆಯಿಂದ ಕೂಡಿದೆ. ವೈದಿಕ ಯುಗದಲ್ಲಿ ಸ್ತ್ರೀಯರು ಗೌರವಯುತವಾದ ಪೂಜ್ಯನೀಯ ಸ್ಥಾನವನ್ನು ಪಡೆದಿದ್ದರು. ಪುರುಷರಂತೆಯೇ ವಿದ್ಯಾಭ್ಯಾಸಕ್ಕೂ ಅರ್ಹವಾಗಿದ್ದು, ಋಗ್ವೇದದಲ್ಲಿ ಹಲವು ಸ್ತ್ರೀಯರ ಹೆಸರುಗಳು ಕಂಡುಬರುತ್ತವೆ. ವೇದಗಳ ಕಾಲದಲ್ಲಿ ಅಪಲಾ, ಲೋಪಮುದ್ರ, ವಿಶ್ವಾವರಾ, ಘೋಷಾ ಜುಷ್ಠಿ ಮುಂತಾದ ಸ್ತ್ರೀಯರು ಕಂಡುಬರುತ್ತಾರೆ. ಉಪನಿಷತ್ತುಗಳ ಕಾಲದಲ್ಲಿ ಮೈತ್ರೇಯಿ, ಗಾರ್ಗಿ ಮುಂತಾದವರು ಕಂಡುಬರುತ್ತಾರೆ. ಸ್ತ್ರೀ ಪುರುಷರೆಂಬ ತಾರತಮ್ಯವಿಲ್ಲದೆ ಉಪನಯನದ ಅಧಿಕಾರವೂ ಸಹ ಇಬ್ಬರಿಗೂ ಸಮಾನವಾಗಿತ್ತು.[೧೬] ಈ ಕಾಲದಲ್ಲಿ ದೊರೆಯುತ್ತಿದ್ದ ಗೌರವ ಮರ್ಯಾದೆಗಳು, ಆ ಕಾಲದ ಸಾಮಾಜಿಕ ಜೀವನದ ಸಾಂಸ್ಕೃತಿಕ ನಿದರ್ಶನವಾಗಿದ್ದ ಹಲವು ಸ್ತ್ರೀಯರು, ಉನ್ನತ ಸ್ಥಾನದಲ್ಲಿದ್ದು, ಹೊಣೆಗಾರಿಕೆಯಿಂದ ಆಡಳಿತ ನಡೆಸುತ್ತಿದ್ದರು. ಸಾರ್ವಜನಿಕ ಕಾರ್ಯಗಳಲ್ಲೂ ಭಾಗವಹಿಸುತ್ತಿದ್ದರು.

ವೈದಿಕ ಯುಗದ ನಂತರದ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳೆಂದರೆ, ಅವರಿಗೆ ಇದ್ದ ಗೌರವ ಮತ್ತು ಸ್ವಾತಂತ್ರ್ಯಗಳು ಕ್ಷಯಿಸಿ ಹೋದ ಸ್ಥಾನಮಾನಗಳ ಇತಿಹಾಸವೇ ಆಗಿದೆ.

ಪ್ರಾಚೀನ ಕರ್ನಾಟಕದ ಸಾಂಸ್ಕೃತಿಕ ಸಮಾಜದ ಆದರ್ಶ ಸಂಸಾರಗಳಲ್ಲಿ ಒಳ್ಳೆಯ ಹೆಂಡತಿ ಮತ್ತು ಒಳ್ಳೆಯ ಸೊಸೆಗೂ ಉತ್ತಮ ಸ್ಥಾನವಿದ್ದರೂ ಹೆಣ್ಣು ಮಗು ಬಯಸಿ ಪಡೆಯುವ ಮಗುವಾಗಿರಲಿಲ್ಲ. ಏಕೆಂದರೆ ಹೆಣ್ಣು ಹೇಗಿದ್ದರೂ ಮನೆಯನ್ನು ಬಿಟ್ಟುಹೋಗುವವಳು, ಗಂಡು ಮಕ್ಕಳು ಮನೆಯಲ್ಲಿಯೇ ಇದ್ದುಕೊಂಡು ತಮ್ಮ ದುಡಿಮೆಯಿಂದ ತಾಯಿ ತಂದೆಗಳನ್ನು ಪೋಷಿಸುವವರು ಎಂಬ ಬಲವಾದ ನಂಬಿಕೆಯನ್ನು ಇಟ್ಟಿದ್ದಾರೆ. ಆದರೆ ಮಗಳು ವಿಧವೆಯಾದಾಗ ಮಾಡಬೇಕಾದ ಸಹಗಮನ ಮಾಡುವ ಭಯವೂ ತಂದೆತಾಯಿಗಳಿಗೆ ಇತ್ತು. ಸ್ತ್ರೀಯರು ಶಿಕ್ಷಣ ಪಡೆಯಲು ಅನರ್ಹರೆಂದು ತಮ್ಮ ಜೀವನದುದ್ದಕ್ಕೂ ಪೋಷ್ಯರಾಗಿಯೇ ಬಾಳಬೇಕೆಂದು ಸ್ಮೃತಿಗಳು ತಿಳಿಸಿಕೊಟ್ಟಿವೆ. ಸ್ತ್ರೀಯಾದವಳು ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲಿ, ಯೌವನದಲ್ಲಿ ಗಂಡನ ಆಶ್ರಯದಲ್ಲಿ, ವೈಧ್ಯವ್ಯ ಪ್ರಾಪ್ತವಾದಾಗ ಮಕ್ಕಳ ಪೋಷಣೆಯಲ್ಲಿ ಇರಬೇಕೆಂದು ಮನುಸ್ಮೃತಿಯು[೧೭] ತಿಳಿಸುತ್ತದೆ.

ಸಾಮಾಜಿಕ ಸಂಸ್ಕೃತಿಯಲ್ಲಿ ಸ್ತ್ರೀಯು ತಾಯಿ, ಪತ್ನಿ, ಸೋದರಿ ಮತ್ತು ಮಗಳಾಗಿ ಪಾತ್ರವಹಿಸುತ್ತಿದ್ದರ ಬಗ್ಗೆ ಶಾಸನಗಳು ಕೂಡ ಮಾಹಿತಿ ಒದಗಿಸುತ್ತವೆ. ಮಹಿಳೆಯರು ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಪ್ರಮುಖ ಪಾತ್ರವಹಿಸಿ ಪಾಲ್ಗೊಳ್ಳುತ್ತಿದ್ದರು. ಹಲಕೂರಿನ ಪ್ರಭುಗೌಡುಗಳ ಕುಟುಂಬದಲ್ಲಿ ನಾಯಕನ ಸಾವಿನಿಂದ ಗೌಡಿಕೆಯ ಒಡೆತನದ ಬಗೆಗೆ ಭಿನ್ನಾಭಿಪ್ರಾಯವೇರ್ಪಟ್ಟು ಆ ಗ್ರಾಮದ ಸಮಸ್ತ ಪ್ರಜೆಗಳು, ಎಲ್ಲ ದೇವಾಲಯದ ಸ್ಥಾನಿಕರು, ಸಮಸ್ತ ಜೇಡಗೊತ್ತಳಿ, ಹನ್ನೆರಡು ಹಿಟ್ಟಿನ ಬೆಸಮಕ್ಕಳು, ಮುಖ್ಯವಾಗಿ ಸಮಸ್ತ ಗೌಡರನ್ನು ಸೇರಿಸಿ ಶ್ರೀಮತಿ ಕಟಿಕಾರ ಬೊಮ್ಮವ್ವೆ ನಾಯಕಿಯು ಗೌಡಿಕೆಯನ್ನು ಪಡೆದ ಮಹತ್ವದ ವಿಷಯ ಶಾಸದಲ್ಲಿ ಉಲ್ಲೇಖಗೊಂಡಿದೆ.[೧೮] ಇಮ್ಮಡಿ ವೀರ ಬಲ್ಲಾಳನ ರಾಣಿ ಅರಸೀಕೆರೆಯ ರಾಜ್ಯಾಧ್ಯಾಕ್ಷದ ಹೆಗ್ಗಡೆ ಕೇಶವಯ್ಯನ ಮಗಳು ಶ್ರೇಷ್ಠರಾದ ಅಧಿಕಾರಿಗಳಾದ ಮಹಾಪ್ರಧಾನ ಪಂಡಿತಯ್ಯ ದಂಡನಾಯಕ ಬಲುಮನುಷ್ಯ ಹೆಗ್ಗಡೆ ಕಲ್ಲಯ್ಯ ಇವರ ಸಹಾಯದಿಂದ ಮಗರೆ ೩೦೦ನ್ನು ನೀರ್ಗುಂದ ನಾಡನ್ನು ಆಳುತ್ತಿದ್ದಳು.[೧೯] ರಾಣಿ ಉಮಾದೇವಿಯು ಕ್ರಿ.ಶ.೧೨೨೭ರಲ್ಲಿ ಕಿತ್ತನಕೆರೆಯ ವೃತ್ತಿಗಳು ನಷ್ಟಕ್ಕೆ ಒಳಗಾಗಿದ್ದಾಗ ಅಲ್ಲಿ ಹಿರಿಯ ಮಹಾಜನರಿಗೆ ವಹಿಸಿಕೊಟ್ಟ ಎಂಟು ವರ್ಷಗಳವರೆಗೆ ತೆರಿಗೆ ಮಾನ್ಯ ಮಾಡಿ ಆನಂತರ ಸಿದ್ದಾಯ ನೀಡುವಂತೆ ಏರ್ಪಾಡು ಮಾಡಿದ್ದಾಳೆ.[೨೦] ಇಂಥ ಸಂದರ್ಭದಲ್ಲಿ ಅರಸಿಯರ ತೀರ್ಮಾನಗಳನ್ನು ಸಮಸ್ತ ಪ್ರಜೆಗಳು, ಗಾವುಂಡರು, ಅಧಿಕಾರಿಗಳು, ಮಹಾಜನರು ಒಪ್ಪಿ ಗೌರವಿಸಿ, ಅದಕ್ಕೆ ಬದ್ಧರಾಗಿರುತ್ತಿದ್ದುದು ರಾಣಿಯರ ರಾಜಕೀಯ ಸ್ಥಾನಮಾನದ ಮೇಲೆ ಬೆಳಕು ಚೆಲ್ಲುತ್ತದೆ. ಈಟಿಕಾರ ಬೊಮ್ಮವ್ವೆಯು ಹಲಕೂರಿನ ಗೌಡಿಕೆಯನ್ನು ಪಡೆದಿರುವುದು, ಗೌಡಿಕೆಯು ನಾಯಕನ ಹೆಣ್ಣು ಗಂಡಿಗೆ ಸಲ್ಲುವುದು ಎಂಬ ತೀರ್ಮಾನವನ್ನು ಮಾಡಿ

ಶಾಸನವನ್ನು ಹಾಕಿಸಿರುವುದನ್ನು ಗಮನಿಸಿದಾಗ ಕೆಲವು ಸ್ತ್ರೀಯರಾದರೂ ಪ್ರಭುಗಾವುಂಡೆಯರಾಗಿ ಆಳ್ವಿಕೆ ಮಾಡಿರಬಹುದೆಂದು ಊಹಿಸಲು ಅವಕಾಶವಿದೆ.

ಸಮಾಜದಲ್ಲಿ ಸಹಗಮನ ಖಡ್ಡಾಯವಾಗಿರಲಿಲ್ಲವೆಂಬ ಅಂಶ ಮಡಿದ ಪತಿಯ ವೀರಗಲ್ಲನ್ನು ಪತ್ನಿಯೇ ನೆಡಿಸಿರುವುದರಿಂದ ತಿಳಿಯಬಹುದಾಗಿದೆ.

ಮಹಿಳೆಯು ಆಡಳಿತದಲ್ಲಿ ಪಾಲ್ಗೊಂಡರು ಸಮಾಜದಲ್ಲಿ ಸತಿಪದ್ಧತಿ, ಬಾಲ್ಯವಿವಾಹ, ವೇಶ್ಯಾವೃತ್ತಿಗಳು ಅನಿಷ್ಟವಾಗಿದ್ದವು. ಸಾಮಾನ್ಯವಾಗಿ ಸಾಮಾನ್ಯ ವರ್ಗದ ಸ್ತ್ರೀಯರು ಅವಿದ್ಯಾವಂತರಾಗಿ ಉಳಿಯುತ್ತಿದ್ದು, ಸಂಗೀತ, ನೃತ್ಯ, ಕಲೆಗಳಲ್ಲಿ ಪರಿಣಿತರಾಗಿದ್ದರು. ಇತ್ತೀಚಿನ ದಿನಮಾನಗಳಲ್ಲಿ ಸ್ತ್ರೀಯರಿಗೆ ಶೈಕ್ಷಣಿಕ, ಸೌಲಭ್ಯಗಳು ಮತ್ತು ಉದ್ಯೋಗದ ಸೌಲಭ್ಯಗಳು ಹೆಚ್ಚು ಲಭಿಸುತ್ತಿದ್ದು, ಸ್ತ್ರೀಯರ ಸ್ಥಾನಮಾನವು ಸಮಾಜದಲ್ಲಿ ಮೇಲ್ಮುಖವಾಗಿ ಚಲಿಸುವುದನ್ನು ಕಾಣುತ್ತೇವೆಯಾದರೂ, ಸ್ತ್ರೀ ಪುರುಷರ ನಡುವಿನ ಅಸಮಾನತೆಯನ್ನು ಪ್ರಸ್ತುತವಾಗಿಯೂ ಕಾಣಬಹುದಾಗಿದೆ.

### ೪.೨. ಧಾರ್ಮಿಕ ವ್ಯವಸ್ಥೆ

ಧಾರ್ಮಿಕ ವ್ಯವಸ್ಥೆ ಪ್ರಸ್ತುತ ಅಧ್ಯಯನ ಕೈಗೊಂಡಿರುವ ಪ್ರದೇಶದ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ. ಹಾಗೆಯೇ ಜನರ ಜೀವನದ ಸಂಸ್ಕೃತಿಯ ಜೀವಾಳವೂ ಹೌದು. ಒಂದು ಸಾಂಸ್ಕೃತಿಕ ಸಮಾಜದಲ್ಲಿ ನೈತಿಕ ಜೀವನ ನಡೆಸುವಲ್ಲಿ ಧರ್ಮದ ಪಾತ್ರ ಬಹಳ ಪ್ರಮುಖವಾಗಿರುತ್ತದೆ. ಒಂದು ಪರಿಸರದಲ್ಲಿ ಮಾನವನು ಯಾವುದೋ ಒಂದು ಒಪ್ಪಿತ ಆಧ್ಯಾತ್ಮಿಕ ಬದುಕನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡಿರುತ್ತಾನೆ. ಸಂಸ್ಕೃತಿಯ ಬಹುಮುಖ ವಿಚಾರಗಳು ಧಾರ್ಮಿಕ ಆಚರಣೆಗಳಲ್ಲಿ ವ್ಯಕ್ತವಾಗುತ್ತದೆ. ಸಾಂಸ್ಕೃತಿಕ ಕೇಂದ್ರಗಳಾಗಿದ್ದ ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ ಹಾಗೂ ಮತಧರ್ಮಗಳ ಕೇಂದ್ರ ಬಿಂದುಗಳಾಗಿ ಬೆಳೆದು ಬಂದಿವೆ. ಜಗತ್ತಿನಾದ್ಯಂತ ಕಾಲ, ದೇಶ, ಪರಿಸರಕ್ಕೆ ಅನುಗುಣವಾಗಿ ಧರ್ಮಾಚರಣೆಗಳು ಬೆಳೆದುಬಂದಿದೆ. ಕೆಲವು ಧರ್ಮಗಳ ಪ್ರಭಾವ ಕಡಿಮೆಯಾದರೆ ಇನ್ನೂ ಕೆಲವು ಧರ್ಮಗಳು ತಮ್ಮ ತಮ್ಮ ತತ್ವಾದರ್ಶಗಳನ್ನು ಉಳಿಸಿಕೊಂಡು ಜೀವಂತವಾಗಿ ಮುನ್ನಡೆದಿವೆ. ಮಾನವಧರ್ಮವನ್ನು ಬಿಟ್ಟು ಬದುಕಲಾರ. ಬೇರೆ ಬೇರೆ ಮತಧರ್ಮಗಳು ಸಮಾಜವನ್ನು ಪೋಷಿಸುತ್ತಾ ಮತ್ತು ಸಮಾಜದಿಂದ ಪೋಷಿಸಲ್ಪಡುತ್ತಾ, ಬೆಳೆದುಬಂದಿರುವುದನ್ನು ಎಲ್ಲಾ ಪ್ರದೇಶಗಳಲ್ಲಿ ಗಮನಿಸಿದಂತೆ ಕಣಕಟ್ಟೆ ಹೋಬಳಿ ವ್ಯಾಪ್ತಿಯ ಪ್ರದೇಶಗಳಲ್ಲೂ ಕಾಣಬಹುದು. ಈ ಪ್ರದೇಶಲ್ಲಿ ಶೈವಧರ್ಮ ಮತ್ತು ವೈಷ್ಣವ ಧರ್ಮವಿದ್ದರೂ, ಶೈವಧರ್ಮದ ಪ್ರಾಬಲ್ಯತೆ ಹೆಚ್ಚು ಎಂಬುದನ್ನು ಇಲ್ಲಿ ಕಟ್ಟಲಾಗಿರುವ ದೇವಾಲಯಗಳಿಂದಲೇ ತಿಳಿದುಕೊಳ್ಳಬಹುದು. ಅಲ್ಲದೇ ಧಾರ್ಮಿಕ ತಿಕ್ಕಾಟಗಳು, ವಿರಸಗಳು

ನಡೆದಿದ್ದವು ಎನ್ನುವುದಕ್ಕೆ ಈ ಪ್ರದೇಶದಲ್ಲಿ ಕಣ್ಮರೆಯಾಗಿರುವ ಜೈನ ಬಸದಿಗಳನ್ನು ಸಾಕ್ಷಿಯಾಗಿಟ್ಟುಕೊಂಡು ಹೇಳಬಹುದು. ಧಾರ್ಮಿಕ ಸಮನ್ವಯತೆಯು ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬಂದಿಲ್ಲವೆಂದೇ ಹೇಳಬಹುದು. ಆದಾಗ್ಯೂ ಒಂದು ಹಂತದ ನಂತರ ಸಹಬಾಳ್ವೆಯನ್ನು ನಡೆಸುತ್ತಿರುವುದನ್ನೂ ಕಾಣುತ್ತೇವೆ.

## ಶೈವಧರ್ಮ

ಭರತಖಂಡದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು. ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪ-ಮೊಹೆಂಜೋದಾರೋಗಳ ಸಂಸ್ಕೃತಿಯಲ್ಲಿ(ಸು.ಕ್ರಿ.ಪೂ.೩೨೫೦-೨೭೫೦) ಕೊಂಬುಗಳಿರುವ ದೇವತೆಯ ಚಿತ್ರವಿರುವ ಮುದ್ರಿಕೆಗಳೂ, ಲಿಂಗಗಳೂ ದೊರಕಿವೆ. ಕೊಂಬುಗಳಿರುವ ದೇವತೆಗೆ ಮೂರು ಮುಖಗಳಿವೆ. ಅವನು ಯೋಗಸಮಾಧಿಯ ಭಂಗಿಯಲ್ಲಿ ಕುಳಿತಿದ್ದಾನೆ. ಅವನ ಸುತ್ತಮುತ್ತ ಮತ್ತು ಪೀಠದ ಕೆಳಗೆ ಆನೆ, ಹುಲಿ, ಖಡ್ಗಮೃಗ, ಎಮ್ಮೆ, ಜಿಂಕೆಗಳು ಸುತ್ತುವರಿದಿವೆ. ಇದನ್ನು ಪರಿಶೀಲಿಸಿ ಈ ವಿಗ್ರಹವು ಹಿಂದೂ ಧರ್ಮದ ಮಹಾಯೋಗಿಯೂ, ಪಶುಪತಿಯೂ ಆದ ಶಿವನ ಪ್ರಾಚೀನ ರೂಪವನ್ನು ಸೂಚಿಸುತ್ತದೆಯೆಂದು ಸರ್.ಜಾನ್ ಮಾರ್ಷಲ್ಲರು ಅಭಿಪ್ರಾಯಪಡುತ್ತಾರೆ.[೨೧] ಮೊಹೆಂಜೊದಾರೋ ಮತ್ತು ಹರಪ್ಪ ಅವಶೇಷಗಳಿಂದ ಶೈವಧರ್ಮವು ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನವಾದ ಜೀವಂತ ಧರ್ಮವೆಂದೂ ಭಾವಿಸಬೇಕಾಗುತ್ತದೆಯೆಂದು ಅವರು ತಮ್ಮ ಗ್ರಂಥದ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಕರ್ನಾಟಕದಲ್ಲಿಯೂ ಪ್ರಾಚೀನ ಕಾಲದಿಂದಲೂ ಶೈವಧರ್ಮ ಆಚರಣೆಯಲ್ಲಿತ್ತು. ಶಿವನನ್ನು ಸ್ಥಿರವಾಗಿ ಪೂಜಿಸುವುದು ಮುಖ್ಯವಾಗಿ ಕಂಡುಬರುತ್ತಿತ್ತು. ಪ್ರಸ್ತುತ ಅಧ್ಯಯನ ಪ್ರದೇಶವಾದ ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲೂ ಶೈವಧರ್ಮ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಇದಕ್ಕೆ ಆ ಪ್ರದೇಶದಲ್ಲಿ ಕಂಡುಬರುವ ಹೆಚ್ಚು ಶೈವ ಸಂಬಂಧಿ ದೇವಾಲಯಗಳೇ ಸಾಕ್ಷಿಯಾಗಿವೆ. ಇವುಗಳು ಧಾರ್ಮಿಕ ಕ್ಷೇತ್ರಗಳಾಗಿ ಕಾರ್ಯವನ್ನು ನಿರ್ವಹಿಸುತ್ತಿವೆ.

ಕಣಕಟ್ಟೆ ಹೋಬಳಿ ಪ್ರದೇಶದಲ್ಲಿ ಶಿವನನ್ನು ನಾನಾ ರೀತಿಯ ಹೆಸರುಗಳಿಂದ ಪೂಜಿಸುತ್ತಿರುವುದನ್ನು ಕಾಣಬಹುದು. ಅವುಗಳಲ್ಲಿ ಕೆಲವು ಹೆಸರುಗಳೆಂದರೆ ಸಿದ್ಧೇಶ್ವರ, ಸಿಂಗನಾಥೇಶ್ವರ, ಸೋಮೇಶ್ವರ, ಮಲ್ಲಿಕಾರ್ಜುನ, ವೀರಭದ್ರೇಶ್ವರ, ಕಲ್ಲೇಶ್ವರ, ಬಸವೇಶ್ವರ, ಮರುಳಸಿದ್ದೇಶ್ವರ, ರೇವಣ್ಣಸಿದ್ದೇಶ್ವರ, ಮಹಾಲಿಂಗೇಶ್ವರ, ಕಮಟೇಶ್ವರ, ರಾಮೇಶ್ವರ ಮುಂತಾದ ಹೆಸರುಗಳ ಶೈವ ದೇವಾಲಯಗಳನ್ನು ಕಾಣಬಹುದು. ಶೈವಧರ್ಮದ ಮುಖ್ಯ ಕೇಂದ್ರ ಶಿವನಗುಡಿ. ಇಂತಹ ಗುಡಿಗಳ ನಿರ್ಮಾಣಕ್ಕೆ ಭಕ್ತರು ದಾನಗಳನ್ನು ನೀಡುತ್ತಿದ್ದರು. ಹಲಕೂರಿನ ಒಂದು ಶಾಸನ

ಅಲ್ಲಿನ ಕಲಿದೇವರಿಗೆ ಅದರ ಜೀರ್ಣೋದ್ಧಾರಕ್ಕೆ, ನೈವೇದ್ಯ, ಅಂಗಭೋಗ, ರಂಗಭೋಗಕ್ಕೆ ಅಲ್ಲಿನ ಮಹಾಪ್ರಭುವಾದ ನರಸಿಂಹಗೌಡನು ದಾನ ನೀಡಿದ್ದನ್ನು ತಿಳಿಸುತ್ತದೆ.[೨೨] ಕಣಕಟ್ಟೆ ಊರಿನ ಮಧ್ಯೆ ಇರುವ ಕಲ್ಲೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕೆ ಸಿಂಗರಸನು ದಾನ ನೀಡಿದ್ದನ್ನು ಕಣಕಟ್ಟೆಯ ಶಾಸನ ತಿಳಿಸುತ್ತದೆ.[೨೩]

ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಸಿಂಗರಸನನ್ನು ಮಗರೆ ಮುನ್ನೂರರ ಮೊದಲ ಬಾಡವಾದ ಕಣಕಟ್ಟೆಗೆ ಸಾಮಂತನನ್ನಾಗಿ ಸ್ಥಾಪಿಸುತ್ತಾನೆ. ಈ ಸಿಂಗರಸನು ಶೈವಭಕ್ತನಾಗಿದ್ದು, ಜೈನ ಕೇಂದ್ರವಾಗಿದ್ದ ಕಣಕಟ್ಟೆಯನ್ನು ಶೈವಪ್ರಧಾನ ಪಟ್ಟಣವನ್ನಾಗಿ ಮಾಡುವಲ್ಲಿ ಯಶಸ್ವಿಯಾದನು. ಇಲ್ಲಿನ ಸಿಂಗನಾಥೇಶ್ವರ ದೇವಾಲಯವನ್ನು ಈತನು ನಿರ್ಮಿಸಿ ಅದಕ್ಕೆ ಅನೇಕ ರೀತಿಯ ದಾನದತ್ತಿಗಳನ್ನು ನೀಡಿರುವುದನ್ನು ಶಾಸನಗಳಿಂದ ತಿಳಿಯಬಹುದು.[೨೪] ಈತನ ನಂತರ ಬಂದ ಸಾಮಂತ ಗೋಯಿದೇವನು ಶಿವಭಕ್ತನಾಗಿದ್ದು, ಈತನು ಕಣಕಟ್ಟೆಯಲ್ಲಿ ಜೈನಧರ್ಮವನ್ನು ಮೆಟ್ಟಿ ಶೈವ ಧರ್ಮಕ್ಕೆ ಪ್ರಾಧಾನ್ಯತೆ ನೀಡಿ ಬೆಳೆಯಲು ಅವಕಾಶ ಮಾಡಿಕೊಟ್ಟನು. ಈತನು ಜೈನಧರ್ಮ ಸ್ಥಗಿತ ಗುಣ ಕಳಾಳಾಪನೆಂಬ ಬಿರುದನ್ನು ಹೊಂದಿದ್ದನು.[೨೫] ಒಂದನೆ ನರಸಿಂಹನ ಕಾಲದಲ್ಲಿ ಮಹಾಪ್ರಧಾನ ಸೇನಾಪತಿ ಹೆಗ್ಗಡೆ ಬಲ್ಲಣ್ಣನು ಇಲ್ಲಿನ ಜಗತೇಶ್ವರ ದೇವಾಲಯಕ್ಕೆ ಭೂಮಿ, ಹೊನ್ನುಗಳ ದಾನ ನೀಡಿ ಪ್ರೋತ್ಸಾಹಿಸಿದ್ದನ್ನು ಇಲ್ಲಿನ ಶಾಸನಗಳು ತಿಳಿಸುತ್ತವೆ. ಸಾತಂಗೆರೆಯಲ್ಲಿ ಸೋಮೇಶ್ವರ ದೇವಾಲಯವಿದ್ದು, ಕಾಳಾಮುಖ ಪಂಡಿತರುದ್ರ ಶಕ್ತಿ ಮಗ ಉತ್ತಮಶಕ್ತಿ ನೆಲೆಸಿದ್ದರು.[೨೭] ಈಗ ರಂಭಾಪುರಿಯ ಪೀಠಕ್ಕೆ ಸೇರಿದ ಮಠವಿದೆ. ಹಲಕೂರಿನಲ್ಲಿ ಕಾಳಾಮುಖ ಮಠವಿದ್ದು, ಅನೇಕ ಶಿಷ್ಯರೊಂದಿಗೆ ಮುನಿಗಳು ನೆಲೆಸಿದ್ದರು (ಈಗ ವೀರಶೈವ ಮಠವಿದೆ).[೨೮] ಕಣಕಟ್ಟೆಯಲ್ಲಿ ಜಗತೇಶ್ವರ ದೇವಾಲಯವಿದ್ದು, ಅಲ್ಲಿದ್ದ ಮಠದಲ್ಲಿ ಮಠಪತಿಗಳು ವಾಸವಾಗಿದ್ದರು.[೨೯]

ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಇದ್ದು, ಸಾಮಾನ್ಯವಾಗಿ ಮೊದಲು ಕಂಡುಬರುವ ಶ್ಲೋಕವೆಂದರೆ "ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ" ಎಂಬ ಶ್ಲೋಕಗಳಿಂದ ಪ್ರಾರಂಭವಾಗಿದೆ. ಚಾಮರದಂತಹ ಬಾಲಚಂದ್ರನಿಂದ ಚುಂಬಿತನಾದ ಉತ್ತುಂಗ ಜಟಾಜೂಟವುಳ್ಳವನು, ಮೂರು ಲೋಕಗಳ ರಚನೆಗೆ ಮೂಲಸ್ತಂಭ ರೂಪನೂ ಆದ ಶಂಭುವಿಗೆ ನಮಸ್ಕಾರವು ಎಂಬ ಅರ್ಥ ಕೊಡುತ್ತದೆ. ಇದರಿಂದ ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿ ಶೈವಧರ್ಮವು ಅಧಿಕಾರಿವರ್ಗದವರಿಂದ ಮತ್ತು ಸಾಮಾನ್ಯ ವರ್ಗದವರಿಂದಲೂ ಪ್ರೋತ್ಸಾಹ ಪಡೆದುಕೊಂಡಿತ್ತು. ಪ್ರಸ್ತುತವಾಗಿ ಈಗಲೂ ಕಣಕಟ್ಟೆ ಹೋಬಳಿಯು ಶೈವ ಧರ್ಮದ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಆಚಾರ-ವಿಚಾರಗಳನ್ನು ಮುಂದುವರೆಸಿಕೊಂಡು ಬರುತ್ತಿದೆ. ಇದಕ್ಕೆ

ಸಾಕ್ಷಿಗಳೆಂಬಂತೆ ಈಗಲೂ ಇಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ದೇವಾಲಯಗಳು ಗದ್ದಿಗೆಗಳು ಕಂಡುಬರುತ್ತವೆ. ಇಂತಹ ಮಠಗಳು ಶೈಕ್ಷಣಿಕ ಕೇಂದ್ರಗಳಾಗಿ ಧಾರ್ಮಿಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಲಿವೆ.

## ವೈಷ್ಣವ ಧರ್ಮ

ಶಿವನಿಗೆ ಒಂದು ಇತಿಹಾಸವಿರುವಂತೆ ಹಿಂದೂ ಧರ್ಮದಲ್ಲಿ ಅವನಷ್ಟೇ ಪ್ರಬಲ ದೇವತೆಯಾಗಿರುವ ವಿಷ್ಣುವಿಗೂ ಒಂದು ಇತಿಹಾಸವುಂಟು. ವೇದಗಳಲ್ಲಿ ವಿಷ್ಣುವು ಪ್ರಧಾನ ದೇವತೆಯಲ್ಲದಿದ್ದರೂ ಅಪ್ರಧಾನವೇನೂ ಅಲ್ಲ. ಅವನು ತನ್ನ ಮೂರು ಹೆಜ್ಜೆಗಳಿಂದ ಲೋಕ ಸಮಸ್ತವನ್ನೇ ಅಳೆಯುವುದನ್ನು ಉತ್ಸಾಹದಿಂದ ಋಗ್ವೇದದಲ್ಲಿ ಬಣ್ಣಿಸಲಾಗಿದೆ. ಅವನ ಎರಡು ಹೆಜ್ಜೆಗಳನ್ನು ಮರ್ತ್ಯರು ಕಾಣಬಹುದು. ಮೂರನೆಯದನ್ನು ಮಾತ್ರ ಯಾರೂ ಕಾಣಲಾರರು. ಏಕೆಂದರೆ ಅದು ಹಕ್ಕಿಗಳ ಸಂಚಾರಪಥವನ್ನು ಮೀರಿ ಆಚೆಗಿದೆ. ಜ್ಞಾನಿಗಳು ವಿಷ್ಣುವಿನ ಅತ್ಯುನ್ನತ ಲೋಕವನ್ನು(ಪರಮಂ ಪದಂ) ಕಾಣಬಲ್ಲರು. ವಿಷ್ಣುವಿನ ಈ ಅತ್ಯುನ್ನತ ಲೋಕದಲ್ಲಿ ಒಂದು ಜೇನಿನ ಬಾವಿಯಿದೆ. ಅಲ್ಲಿ ದೇವತೆಗಳೆಲ್ಲರೂ ರಮಿಸುವರು. ಇವೇ ಮೊದಲಾದ ಉಕ್ತಿಗಳನ್ನು ನೋಡಿದರೆ ವಿಷ್ಣುವಿಗೆ ಋಗ್ವೇದದಲ್ಲಿ ಗೌರವದ ಸ್ಥಾನವಿದೆಯೆಂದು ಭಾವಿಸಬೇಕಾಗುತ್ತದೆ. ಬ್ರಾಹ್ಮಣಗಳ ಕಾಲದಲ್ಲಿ ಅವನ ಪ್ರಾಧಾನ್ಯವು ಹೆಚ್ಚುತ್ತಾ ಹೋಯಿತು. ದೇವತೆಗಳಲ್ಲೆಲ್ಲಾ ವಿಷ್ಣುವೇ ವರಿಷ್ಠ ದೇವತೆಯೆಂದೂ ಅಗ್ನಿಯೇ ಕನಿಷ್ಠ ದೇವತೆಯೆಂದೂ ಐತ್ತರೇಯ ಬ್ರಾಹ್ಮಣವು ಬಣ್ಣಿಸಿದೆ. ಅದೇ ಬ್ರಾಹ್ಮಣದಲ್ಲಿ ಅಸುರರ ವಿರುದ್ಧ ಹೋರಾಡಲು ದೇವತೆಗಳಿಗೆ ಸಹಾಯ ಮಾಡುವವನು ವಿಷ್ಣು ಎಂದು ಹೇಳಿದೆ. ಇತಿಹಾಸ ಮಹಾಕಾವ್ಯಗಳ ಕಾಲದಲ್ಲಿ ವಿಷ್ಣುವು ಪರಮದೇವತೆಯಾಗಿ ಪರಿಣಮಿಸಿದನು.[೩೦]

ವಿಷ್ಣುವನ್ನೇ ಆರಾಧ್ಯದೈವವಾಗುಳ್ಳ ಈ ವೈಷ್ಣವ ಧರ್ಮದ ಸ್ವರೂಪವನ್ನು ಸಂಗ್ರಹವಾಗಿ ಹೀಗೆ ಹೇಳಬಹುದು. "ಭಗವಂತನು ಸುಗುಣನೆಂದು ಭಾವಿಸಿ ಅವನ ಪ್ರತೀಕೋಪಾಸನೆಯನ್ನು ಮಾಡುವುದು ಇದರ ಮುಖ್ಯ ಲಕ್ಷಣ. ವಿಷ್ಣುವಿನ ಹತ್ತು ಅವತಾರಗಳಲ್ಲಿ ಯಾವುದನ್ನೇ ಪೂಜಿಸಲಿ ಈ ಧರ್ಮವು ಮುಖ್ಯವಾಗಿ ಏಕ ದೇವೋಪಾಸನೆಯನ್ನು ಎತ್ತಿ ಹಿಡಿಯುತ್ತದೆ. ಈ ಇಷ್ಟದೈವದ 'ಪ್ರಸಾದ' ಅಥವಾ ಕರುಣೆಗಾಗಿ ತನ್ನನ್ನು ತಾನು ಭಗವಂತನಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಬೇಕು(ಇದೆ ಪ್ರಪತ್ತಿ). ವಿಷ್ಣುವಿಗಿಂತ ಕೆಳಮಟ್ಟದಲ್ಲಿದ್ದರೂ ಬೇರೆ ಬೇರೆ ಸಾಮರ್ಥ್ಯಗಳನ್ನು ಪಡೆದು, ಭಿನ್ನ ಭಿನ್ನ ಕರ್ತವ್ಯಗಳನ್ನು ಹೊತ್ತಿರುವ ಬ್ರಹ್ಮ, ಶಿವ ಮುಂತಾದ ಅಸಂಖ್ಯಾತ ದೇವತೆಗಳಿಗೆ ಈ ಧರ್ಮವು ಗೌರವವನ್ನು ತೋರಿಸುತ್ತದೆ. ಭಗವಂತನು ಈ ಲೋಕವನ್ನು ಸೃಷ್ಟಿಸಿರುವಂತೆಯೇ ಅದರ ಉದ್ಧಾರಕ್ಕಾಗಿ ಆಗಾಗ ಅವತರಿಸುತ್ತಾನೆಂದು ಅದು

ನಂಬುತ್ತದೆ. ಮೋಕ್ಷದಲ್ಲಿ ಬೇರೆ ಬೇರೆ ಹಂತಗಳುಂಟೆಂದು, ಭೌದ್ಧಿಕವಾದ ಜ್ಞಾನಕ್ಕಿಂತ ಭಾವರೂಪವಾದ ಭಕ್ತಿಯೇ ಶ್ರೇಷ್ಠವೆಂದು ವೈಷ್ಣವಧರ್ಮವು ಒತ್ತಿ ಹೇಳುತ್ತದೆ.[೩೧]

ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ. ರಾಮಾನುಜಾಚಾರ್ಯರು ಕ್ರಿ.ಶ.೧೨ನೇ ಶತಮಾನದಲ್ಲಿ ತಮಿಳುನಾಡಿನಿಂದ ಕರ್ನಾಟಕಕ್ಕೆ ಬಂದ ನಂತರ, ಆಗ ಆಳ್ವಿಕೆ ಮಾಡುತ್ತಿದ್ದ, ಹೊಯ್ಸಳರ ಪ್ರಖ್ಯಾತ ಚಕ್ರವರ್ತಿ ವಿಷ್ಣುವರ್ಧನನ ಆಶ್ರಯ ಪಡೆದು, ಶ್ರೀವೈಷ್ಣವ ಧರ್ಮವನ್ನು ಪ್ರಚಾರ ಮಾಡಿದರು. ರಾಮಾನುಜಾಚಾರ್ಯರು ಮಿರ್ಲೆ, ಸಾಲಿಗ್ರಾಮ, ತೊಣ್ಣೂರು, ಮೇಲುಕೋಟೆ, ಬೇಲೂರುಗಳಲ್ಲಿ ಕೆಲದಿನಗಳು ತಂಗಿದ್ದು, ಧರ್ಮ ಪ್ರಚಾರ ಕೈಗೊಂಡರೆಂದು ತಿಳಿದುಬರುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶಕ್ಕೆ ಹತ್ತಿರವಾದ ಬೇಲೂರು ಪ್ರಮುಖ ವೈಷ್ಣವ ಕೇಂದ್ರವಾಗಿದ್ದು, ಅಲ್ಲಿನ ಕೇಶವನಿಗೆ ಹಳ್ಳಿಗಳನ್ನು ದಾನ ನೀಡಿದ ಉಲ್ಲೇಖವು ಶಾಸನದಲ್ಲಿದೆ.[೩೨]

ದುರ್ಗದ ರಂಗಪ್ಪನಾಯಕರಿಂದ ಸೊಪ್ಪಿನಹಳ್ಳಿಯನ್ನು ದಾನ ಪಡೆದ ತಿರುವೆಂಗಳಯ್ಯನು ಆ ಗ್ರಾಮವನ್ನು 'ಬೇಲೂರ ಚೆನ್ನಿಗರಾಯನಿಗೆ' ಸಮರ್ಪಿಸಿದ್ದಾನೆ.[೩೩] ಕಣಕಟ್ಟೆ ಹೋಬಳಿ ಪರಿಸರದಲ್ಲಿ ಶೈವ ದೇವಾಲಯಗಳಿಗೆ ಹೋಲಿಸಿದಾಗ ವೈಷ್ಣವ ದೇವಾಲಯಗಳು ಕಡಿಮೆ ಎಂದೇ ಹೇಳಬಹುದು. ಇಲ್ಲಿನ ದೇವಾಲಯಗಳೆಂದರೆ ಕಿತ್ತನಕೆರೆಯ ಲಕ್ಷ್ಮೀನರಸಿಂಹ ದೇವಾಲಯ, ಕಣಕಟ್ಟೆಯ ಲಕ್ಷ್ಮೀನಾರಾಯಣ, ಚಿಕ್ಕಹಲ್ಕೂರಿನ ಬಿಳಿಕಲ್ಲು ರಂಗನಾಥಸ್ವಾಮಿ ದೇವಾಲಯಗಳನ್ನು ಹೆಸರಿಸಬಹುದು. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ಅನೇಕ ಅಗ್ರಹಾರಗಳನ್ನು ಕಟ್ಟಿಸಿರುವುದನ್ನು ಶಾಸನಗಳಿಂದ ತಿಳಿಯಬಹುದು. ಇಮ್ಮಡಿ ವೀರ ಬಲ್ಲಾಳನು ಕರ್ನಾಟಕ ಕುಲೋತ್ತಮರಾದ ೧೨೦ ಬ್ರಾಹ್ಮಣರಿಗೆ ಕಿತ್ತನಕೆರೆಯನ್ನು ಬಲ್ಲಾಳಪುರವೆಂಬ ಹೆಸರಿನಲ್ಲಿ ಅಗ್ರಹಾರ ಮಾಡಿಕೊಟ್ಟಿದ್ದಾನೆ.[೩೪] ಇಲ್ಲಿ ನರಸಿಂಹನ ಕಾಲದಲ್ಲಿ ಬೊಪ್ಪದೇವನೆಂಬ ಬ್ರಾಹ್ಮಣನು ಲಕ್ಷ್ಮೀನರಸಿಂಹ ದೇವರನ್ನು ಪ್ರತಿಷ್ಠಾಪಿಸಿದ್ದಾನೆ. ೨ನೇ ನರಸಿಂಹನ ಒಲವು ವೈಷ್ಣವ ಮತದ ಕಡೆಗೆ ಹೆಚ್ಚಾಗಿದ್ದುದ ರಿಂದ ಕಣಕಟ್ಟೆಯನ್ನು ವಿಜಯನರಸಿಂಹಪುರವೆಂದು ನಾಮಕರಣ ಮಾಡಿದ್ದಾನೆ.[೩೫] ಅರಸೀಕೆರೆಯ ಹತ್ತಿರ ಅಮರಗಿರಿ ಎಂದು ಪ್ರಸಿದ್ಧವಾಗಿರುವ ಮಾಲೇಕಲ್ಲು ತಿರುಪತಿಯು ಈ ಪ್ರದೇಶದ ಪ್ರಸಿದ್ಧ ವೈಷ್ಣವ ತೀರ್ಥಕ್ಷೇತ್ರವಾಗಿದ್ದು ನಾನಾ ಜಾತಿ ಜನಾಂಗಗಳ ಭಕ್ತಾದಿಗಳನ್ನು ಹೊಂದಿದೆ. ಹೀಗೆ ಶ್ರೀ ವೈಷ್ಣವ ಧರ್ಮವು ಪ್ರಸ್ತುತ ಅಧ್ಯಯನ ಪ್ರದೇಶದ ಪರಿಸರದಲ್ಲಿ ಪ್ರಚಲಿತದಲ್ಲಿತ್ತು ಎಂಬುದಕ್ಕೆ ಮೇಲೆ ತಿಳಿಸಿದ ಎಲ್ಲಾ ಅಂಶಗಳು ಪ್ರಮುಖವಾಗಿವೆ. ಹಾಗೆಯೇ ಈಗ ಇಲ್ಲಿ ಸಿಕ್ಕಿರುವ ವೈಷ್ಣವ ದೇವಾಲಯಗಳನ್ನು ಗಮನಿಸಿದಾಗ ಈಗಲೂ ವೈಷ್ಣವ ಧರ್ಮವು ಅಸ್ತಿತ್ವದಲ್ಲಿರುವುದನ್ನು ಗಮನಿಸಬಹುದು.

## ಜೈನಧರ್ಮ

ಪ್ರಾಚೀನ ಕಾಲದಲ್ಲಿ ಜೈನಧರ್ಮ ಈ ಪ್ರದೇಶದಲ್ಲಿ ನೆಲೆಯೂರಿರುವ ಸಾಧ್ಯತೆಗಳು ಕಂಡುಬರುತ್ತವೆ. ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ.[೩೬] ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮವು ಒಂದು ಪ್ರಬಲವಾದ ಧರ್ಮವಾಗಿತ್ತು. ದಕ್ಷಿಣ ಭಾರತದ ಜೈನಧರ್ಮ ಕರ್ನಾಟಕದ ಇತಿಹಾಸದೊಂದಿಗೆ ಬೆಳೆಯುತ್ತಾ ತನ್ನದೇ ಆದ ಇತಿಹಾಸವನ್ನು ನಿರ್ಮಿಸಿದೆ. ಸಾಹಿತ್ಯ ಗ್ರಂಥಗಳು ಮತ್ತು ಪುರಾತತ್ವ ಆಕರಗಳು ಜೈನಧರ್ಮವು ಸಾಂಸ್ಕೃತಿಕ ಕ್ಷೇತ್ರಕ್ಕೆ ಕೊಟ್ಟ ಕೊಡುಗೆಗಳನ್ನು ತಿಳಿಸುತ್ತವೆ. ಕರ್ನಾಟಕದಲ್ಲಿ ಜೈನಧರ್ಮವು ಉತ್ತರ ಭಾರತದಿಂದ ಬಂದ ಜೈನಗುರು ಭದ್ರಬಾಹುವಿನಿಂದ ಆರಂಭವಾಗುತ್ತದೆ. ಮೌರ್ಯರ ಪ್ರಖ್ಯಾತ ಚಕ್ರವರ್ತಿಯಾಗಿದ್ದ ಚಂದ್ರಗುಪ್ತ ಮೌರ್ಯ ಜೈನಾಚಾರ್ಯನಾದ ಭದ್ರಬಾಹುವಿನೊಂದಿಗೆ ಕರ್ನಾಟಕದ ಶ್ರವಣಬೆಳಗೊಳಕ್ಕೆ ಬಂದು ನೆಲೆಸಿದನು. ಕಾಲಾನಂತರದಲ್ಲಿ ಕರ್ನಾಟಕವನ್ನು ಆಳ್ವಿಕೆ ಮಾಡಿದ ಅರಸು ಮನೆತನಗಳು ಈ ಧರ್ಮವನ್ನು ಬೆಂಬಲಿಸಿದ್ದರಿಂದ ತನ್ನ ಮೇರೆಯನ್ನು ವಿಸ್ತರಿಸಿಕೊಂಡಿತು. ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿ ಜೈನಧರ್ಮಕ್ಕೆ ಸಂಬಂಧಪಟ್ಟ ಶಾಸನಗಳು ಲಭ್ಯವಿದೆ. ಆದರೆ ಇಂದು ಯಾವುದೇ ಬಸದಿಗಳು ಇಲ್ಲಿ ಕಂಡುಬರುವುದಿಲ್ಲ.

ಈ ಪ್ರದೇಶದಲ್ಲಿ ದೊರಕಿರುವ ಪ್ರಾಚೀನ ಶಾಸನಗಳು ಸ್ಮಾರಕ, ಅವಶೇಷಗಳು, ಜೈನಧರ್ಮವು ಗಂಗರ ಕಾಲದಲ್ಲೇ ಪ್ರವರ್ಧಮಾನವಾಗಿತ್ತೆಂಬುದನ್ನು ತಿಳಿಸುತ್ತವೆ. ಇಲ್ಲಿನ ಸೋಮಶೆಟ್ಟಿ ಹಳ್ಳಿಯಲ್ಲಿ ಕ್ರಿ.ಶ.೭-೧೦ನೇ ಶತಮಾನದವರೆಗಿನ ಬಂಡೆಗಲ್ಲು ಶಾಸನಗಳು ಲಭ್ಯವಿವೆ. ಆ ಸ್ಥಳವು ಜೈನರಿಗೆ ಪವಿತ್ರ ಸ್ಥಳವಾಗಿತ್ತೆಂಬುದನ್ನು ತಿಳಿಸುತ್ತದೆ. ಆಕಾಲದಲ್ಲಿ ಆ ಸುತ್ತಮುತ್ತಲಿನಲ್ಲಿ ಜೈನಧರ್ಮ ಕೇಂದ್ರಗಳಿದ್ದವೆಂಬುದನ್ನು ಸೂಚಿಸುತ್ತವೆ. ಈ ಶಾಸನಗಳಲ್ಲಿ ಜಿನಮುನಿಗಳ ಶಿಷ್ಯರು, ಶಿಷ್ಯಿತಿಯರು ಮಡಿದುದನ್ನು ಹೇಳಿದೆ.[೩೭] ಕ್ರಿ.ಶ.೯-೧೦ನೇ ಶತಮಾನಕ್ಕೆ ಸೇರಬಹುದಾದ ಕೆಲವು ಜೈನ ವಾಸ್ತುವಿನ ಅವಶೇಷಗಳನ್ನು ಆಧರಿಸಿ ಕಣಕಟ್ಟೆಯಲ್ಲಿ ಬಸದಿ ಇತ್ತೆಂದು ಗುರುತಿಸಬಹುದು. ಕ್ರಿ.ಶ.೧೧೨೮ರ ನಂತರ ಇಲ್ಲಿನ ಆಡಳಿತ ಸೂತ್ರವನ್ನು ಹಿಡಿದ ಸಾಮಂತ ಸಿಂಗರಸನು ಶಿವಭಕ್ತನಾಗಿದ್ದು, ಶೈವ ದೇವಾಲಯ ನಿರ್ಮಿಸಿದ ನಂತರ ಬಂದ ಸಾಮಂತ ಗೋಯಿದೇವನನ್ನು ಜೈನಮಾರ್ಗಸ್ಥಗಿತಗತಾ ಕಳಾಳಾಪನುದ್ಯತ್ಪ್ರತಾಪಂ ಎಂದು ಹೊಗಳಿದೆ. ಮುಂದೆ ಅನ್ಯಧರ್ಮ ಪ್ರಾಬಲ್ಯದ ಕಾಲದಲ್ಲಿ ಕಣಕಟ್ಟೆಯ ಬಸದಿಗೆ ಆ ಧರ್ಮೀಯರಿಗೆ ಒದಗಿರಬಹುದಾದ ಸ್ಥಿತಿಯನ್ನು ಊಹಿಸಬಹುದಾಗಿದೆ. ಪ್ರಸ್ತುತವಾಗಿ ಇಲ್ಲಿ ಯಾವುದೇ ಜೈನ ದೇವಾಲಯಗಳು ಕಂಡುಬರುವುದಿಲ್ಲ.

## ವೀರಶೈವ ಧರ್ಮ

ಕಣಕಟ್ಟೆ ಹೋಬಳಿ ಪರಿಸರದಲ್ಲಿ ವೀರಶೈವ ಧರ್ಮವು ಹೆಚ್ಚು ಕಂಡುಬರುತ್ತದೆ. ಕಲ್ಯಾಣದ ಕ್ರಾಂತಿಯ ನಂತರ ಕಲ್ಯಾಣದಿಂದ ಶರಣರು ನಾನಾದಿಕ್ಕಿಗೆ ಚದುರಿ ಹೋದದ್ದು ವೀರಶೈವ ಧರ್ಮದ ಪ್ರಸರಣ ಮತ್ತು ಪರಿವರ್ತನೆಯ ದೃಷ್ಟಿಯಿಂದ ಮಹತ್ವವಾದುದು. ಕಲಚೂರಿಗಳ ಪತನಾನಂತರ ಆಶ್ರಯವನ್ನು ಹುಡುಕುತ್ತಾ ಅಧಿಕಾರಿಗಳು ಕಲಾವಿದರ ಕುಟುಂಬಗಳು ಹೊಯ್ಸಳ ನಾಡಿಗೆ ವಲಸೆ ಬಂದಂತೆ ವೀರಶೈವ ಧರ್ಮವೂ ಇಲ್ಲಿ ಬಂದು ಬೇರು ಬಿಡತೊಡಗಿತು. ಶೈವ ಮತ್ತು ವೈಷ್ಣವ ಧರ್ಮಗಳ ತೀವ್ರ ಪೈಪೋಟಿಯ ಮಧ್ಯೆ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವ ಸವಾಲಿಗೆ ವೀರಶೈವ ಧರ್ಮ ಸಿಕ್ಕಿಕೊಂಡಿತು ಮತ್ತು ಅದು ತನ್ನ ಅಸ್ತಿತ್ವವನ್ನು ಕಂಡುಕೊಂಡಿತು. ೨ನೇ ವೀರಬಲ್ಲಾಳನ ಕಾಲದಲ್ಲಿ ಈ ಪ್ರದೇಶಕ್ಕೆ ಪದಾರ್ಪಣೆ ಮಾಡಿದ ವೀರಶೈವ ಧರ್ಮವು ಸೋಮೇಶ್ವರನ ಕಲಾಕ್ಕಾಗಲೇ ವ್ಯಾಪಕವಾಗಿ ಹರಡಿ ಪ್ರಭಾವಿಸಿತು ಎಂದು ಸ್ಪಷ್ಟವಾಗುತ್ತದೆ. ಶೆಟ್ಟಿಪಟ್ಟಣವಾಗಿದ್ದ ಮುತ್ತನ ಹೊಸವೂರಿನ ವರ್ತಕ ಸಮೂಹ ವೀರಶೈವ ದೀಕ್ಷೆ ಪಡೆದಿತ್ತೆಂದು ಊಹಿಸಬಹುದು. ಇವತ್ತಿಗೂ ಈ ಗ್ರಾಮದಲ್ಲಿ ಬಣಜಿಗ ಲಿಂತಾಯಿತರ ಸಂಖ್ಯೆ ಅಧಿಕಾವಾಗಿದ್ದು, ಕುಂಜೇಶ್ವರ ಎನ್ನುವ ದೇವಾಲಯದ ಅಡಳಿತ ಪೂಜೆಯನ್ನು ಅವರೇ ನಡೆಸಿಕೊಂಡು ಬರುತ್ತಿದ್ದಾರೆ. ಚನ್ನಬಸವಣ್ಣನ ಉಲ್ಲೇಖವನ್ನು ಅರಸೀಕೆರೆಯ ಮಾಲೆಕಲ್ ತಿರುಪತಿಯ ಶಾಸನದಲ್ಲಿ ಕಾಣುತ್ತೇವೆ.[೫೯] ಪ್ರಸ್ತುತ ಸಾತಂಗೆರೆಯಲ್ಲಿ ರಂಭಾಪುರಿ ಪೀಠಕ್ಕೆ ಸೇರಿದ ಮಠವಿದೆ. ಹಲಕೂರಿನಲ್ಲಿ ವೀರಶೈವ ಮಠವಿದೆ ಮತ್ತು ಶಶಿವಾಳ, ಚಿಕ್ಕಮೇಡಿಕುರ್ಕೆ, ಮಾಡಾಳು, ಮೇಳೆನಹಳ್ಳಿಗಳಲ್ಲಿ ಚೆನ್ನಬಸವೇಶ್ವರ ರೇವಣ್ಣ, ಸಿದ್ದೇಶ್ವರನ ಗದ್ದುಗೆಗಳು ಇವೆ. ಇಂತಹ ಅಂಶಗಳಿಂದ ಪ್ರಸ್ತುತ ಅಧ್ಯಯನದ ಪರಿಸರದಲ್ಲಿ ಸಂಸ್ಕೃತಿಯ ಪ್ರತೀಕವಾಗಿರುವ ವೀರಶೈವ ಧರ್ಮ ಪ್ರಚಲಿತದಲ್ಲಿತ್ತು ಮತ್ತು ಈಗಲೂ ಅದು ವ್ಯಾಪಕವಾಗಿ ಹರಡಿಕೊಂಡು ವಿಸ್ತಾರವನ್ನು ಹೆಚ್ಚಿಸಿಕೊಳ್ಳುತ್ತಾ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವುದನ್ನು ಕಾಣುತ್ತೇವೆ.

## ೪.೩. ಆರ್ಥಿಕ ಸ್ಥಿತಿಗತಿ

ಸಮಾಜದಲ್ಲಿ ಆರ್ಥಿಕ ವ್ಯವಸ್ಥೆಯು ಕೂಡ ಪ್ರಮುಖ ಪಾತ್ರ ವಹಿಸುತ್ತದೆ. ಒಂದು ಪ್ರದೇಶದ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಆ ಪರಿಸರದ ನೈಸರ್ಗಿಕ ಸಂಪತ್ತು, ಮೂಲಭೂತ ಸೌಕರ್ಯಗಳು ಮತ್ತು ಜನರ ದುಡಿಮೆ ಅವಲಂಬಿತವಾಗಿರುತ್ತದೆ. ಈ ವ್ಯವಸ್ಥೆಗೆ ಅನುಗುಣವಾಗಿ ಪ್ರದೇಶದ ಜನಜೀವನ ಪದ್ಧತಿ ನಿರ್ಧಾರವಾಗುತ್ತದೆ. ಈ ದಿಸೆಯಲ್ಲಿ ಕಣಕಟ್ಟೆ ಪರಿಸರವು ಹಾಸನ ಜಿಲ್ಲೆಯಲ್ಲಿ ವಿಲೀನಗೊಂಡು ಅಂದಿನಿಂದ ಇಂದಿನವರೆಗೂ ವ್ಯವಸಾಯದ ಚಟುವಟಿಕೆಗಳು ಮತ್ತು ವ್ಯಾಪರದ ಕೇಂದ್ರವಾಗಿದೆ. ಈ ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ಅರಿಯಲು ಪ್ರಮುಖ

ಆಕರಗಳಲ್ಲಿ ಶಾಸನಗಳು ಬಹುಮುಖ್ಯ ಪಾತ್ರವಹಿಸಿದೆ. ಇವುಗಳ ಜೊತೆಗೆ ವಿವಿಧ ಇಲಾಖೆಗಳಿಂದ ಸಂಗ್ರಹಿಸಿದ ಮಾಹಿತಿ ಮತ್ತು ಸ್ಥಳೀಯರಿಂದ ಪಡೆದ ಮಾಹಿತಿಗಳಿಂದ ಈ ವಿಷಯಕ್ಕೆ ಸಂಬಂಧಿಸಿದಂತೆ ಕೆಲವು ಅಂಶಗಳನ್ನು ತಿಳಿಸಲಾಗಿದೆ.

**ಕೃಷಿ ಭೂಮಿ**

ಕಣಕಟ್ಟೆ ಹೋಬಳಿಗೆ ಒಳಪಡುವ ಪ್ರದೇಶಗಳಲ್ಲಿ ವಿವಿಧ ಬಗೆಯ ಕೃಷಿ ಭೂಮಿಗಳು ಇವೆ ಎಂಬುದಕ್ಕೆ ಅನೇಕ ಶಾಸನಾಧಾರಗಳು ದೊರೆಯುತ್ತವೆ. ಅವುಗಳಲ್ಲಿ ಗದ್ದೆ, ತೋಟ, ಬೆದ್ದಲು, ಹೊಲ ಎಂಬ ವರ್ಗಗಳಿಗೆ ಶಾಸಾನಾಧಾರಗಳಿವೆ. ಸಾಮಾನ್ಯವಾಗಿ ನೀರಾವರಿ ಮತ್ತು ಕೆರೆಗಳ ಆಶ್ರಯದಲ್ಲಿ ಗದ್ದೆಗಳು ಕಂಡುಬರುತ್ತವೆ. ಕೆರೆಗಳು ಇಲ್ಲದೆ ಮಳೆಯನ್ನೇ ಅವಲಂಬಿಸಿಕೊಂಡು ಕೃಷಿ ಮಾಡಬೇಕಾಗಿದ್ದ ಜಮೀನುಗಳನ್ನು ಹೊಲ ಮತ್ತು ಬೆದ್ದಲು ಎಂದು ಕರೆಯುತ್ತಾರೆ. ಮರಳು ಮಿಶ್ರಿತವಾದ ಕೆಂಪುಮಣ್ಣು ಮತ್ತು ಕಪ್ಪುಮಣ್ಣನ್ನು ಹೊಂದಿರು ವುದರಿಂದ ತೆಂಗು ಹೆಚ್ಚು ಬೆಳೆಯುತ್ತಿತ್ತು ಎಂದು ತಿಳಿಯಬಹುದು. ಕೆರೆಯ ಏರಿಯ ಕೆಳಗಿನ ಪ್ರದೇಶದಲ್ಲಿ ಭೂಮಿಯನ್ನು ಬಿತ್ತಿ ಬೆಳೆಯುವುದು ಉತ್ತಮವಾದ ಭೂಮಿ ಆಗಿತ್ತು. ಇದರಲ್ಲಿ ಉತ್ತಮವಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಈಗಲೂ ಸಹ ಈ ಪ್ರದೇಶದಲ್ಲಿ ತೆಂಗು ಹೆಚ್ಚು. ಜೊತೆಗೆ ಅಡಿಕೆಯ ಬೆಳೆಯು ಹೆಚ್ಚಾಗಿದ್ದು, ಇದಕ್ಕೆ ಇಲ್ಲಿನ ಮಣ್ಣಿನ ಫಲವತ್ತತೆಯೇ ಕಾರಣವಾಗಿದೆ.

**ಕೃಷಿವ್ಯವಸ್ಥೆ**

ಗ್ರಾಮೀಣ ಸೊಗಡನ್ನು ಮೈಗೂಡಿಸಿಕೊಂಡಿರುವ ಕಣಕಟ್ಟೆ ಹೋಬಳಿಯ ಎಲ್ಲಾ ಹಳ್ಳಿಗಳೂ ಶೇ.೮೦ರಷ್ಟು ಭಾಗ ಕೃಷಿಯನ್ನೇ ಅವಲಂಬಿಸಿದೆ. ಭೂಮಿಯನ್ನು ಸಾಗುವಳಿ ಮಾಡಿ ಬದುಕುವ ರೈತ ಜನರು ಹೆಚ್ಚಾಗಿ ಕಂಡುಬರುತ್ತಾರೆ. ಭೂಮಿಯಲ್ಲಿ ಕೃಷಿ ಮಾಡುವವರನ್ನು ಒಕ್ಕಲಿಗ ಎಂದು ಕರೆಯುತ್ತಾರೆ. ಭೂಮಿಯನ್ನು ಉತ್ತು ಭಿತ್ತಿ ಬೆಳೆಯನ್ನು ತೆಗೆಯುವುದು ಒಕ್ಕಲಿಗನ ಮುಖ್ಯ ಕರ್ತವ್ಯವಾಗಿದೆ. ಹೀಗೆ ಕೃಷಿಯ ಮೂಲಕ ಬೆಳೆಯನ್ನು ತೆಗೆಯುವ ರೈತರನ್ನು ಒಕ್ಕಲು ಮಕ್ಕಳೆಂದು ಕರೆಯುವರು. ಇದಕ್ಕೆ ಅನೇಕ ಶಾಸನಾಧಾರಗಳು ಇದೆ. ಮಾನವ ಎಂದು ತನ್ನ ಅಲೆಮಾರಿ ಜೀವನಕ್ಕೆ ಮಂಗಳ ಹಾಡಿ ಒಂದು ಸ್ಥಿರವಾಗಿ ನೆಲೆನಿಂತು ವಾಸಿಸಲು ತೊಡಗಿದನೊ ಅಲ್ಲಿಂದಲೇ ಕೃಷಿಯ ಆರಂಭವನ್ನು ಕಾಣಬಹುದು. ವ್ಯವಸಾಯಕ್ಕೆ ಅಗತ್ಯವಾದ ಸಾಧನ ಸಲಕರಣೆಗಳಾದ ನೇಗಿಲ್ಲನು ಬಳಸಿ ಪ್ರಾಣಿಗಳನ್ನು ಬಳಸಿ, ಉತ್ತು ಬೀಜವನ್ನು ಬಿತ್ತಿ ಬೆಳೆಗಳನ್ನು ಬೆಳೆದು ಬದುಕತೊಡಗಿದರು. ಹೀಗೆ ಕೃಷಿ ಆರ್ಥಿಕತೆಯನ್ನು ಆಧರಿಸಿದ ಗ್ರಾಮಗಳು ಅಸ್ತಿತ್ವಕ್ಕೆ ಬಂದಿವೆ. ವ್ಯವಸಾಯಕ್ಕೆ ರೈತನು ಈಗ ನೇಗಿಲನ್ನೇ ಅವಲಂಬಿಸಬೇಕೆಂದಿಲ್ಲ. ಟ್ರಾಕ್ಟರ್‌ಗಳಲ್ಲಿ

ಹೊಲಗಳನ್ನು ಉಳುಮೆ ಮಾಡುವ ಪದ್ಧತಿ ಇತ್ತೀಚೆಗೆ ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದು ಇದರಿಂದ ಸಮಯದ ಉಳಿತಾಯವಾಗುತ್ತದೆ ಎಂದು ಇಲ್ಲಿನ ರೈತರು ಹೇಳುತ್ತಾರೆ.

**ಬೆಳೆಗಳು**

ಈ ಪ್ರದೇಶದಲ್ಲಿ ಬೆಳೆಗಳು ವೈವಿಧ್ಯತೆಯಿಂದ ಕೂಡಿದ್ದು ಕೆರೆ ಮತ್ತು ಬಾವಿಗಳ ಆಶ್ರಯದಲ್ಲಿ ಭತ್ತ, ತೆಂಗು ಮತ್ತು ಅಡಿಕೆಗಳನ್ನು ಬೆಳೆಯುತ್ತಾರೆ. ಮಳೆಯನ್ನಾಧರಿಸಿದ ಪ್ರದೇಶದಲ್ಲಿ ರಾಗಿ, ಜೋಳ, ಸಜ್ಜೆ, ನೆಲಗಡಲೆ, ಎಳ್ಳು, ಮೆಕ್ಕೆಜೋಳ, ನವಣೆ, ಹುರುಳಿ ಮುಂತಾದ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ. ತೆಂಗು ಮತ್ತು ಅಡಿಕೆ ತೋಟಗಳು ಹೆಚ್ಚು ಕಂಡುಬರುತ್ತಿದ್ದು, ಭೂಮಿಯ ಒಳಗೆ ಮಣ್ಣು ತೇವಾಂಶವನ್ನು ಹಿಡಿದಿಟ್ಟುಕೊಂಡಿರುವುದರಿಂದ ತೆಂಗಿಗೆ ಸದಾಕಾಲ ತಂಪಾದ ತೇವಾಂಶವಿರುತ್ತದೆ. ಇತ್ತೀಚೆಗೆ ಇಲ್ಲಿ ವಾಣಿಜ್ಯ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದಾರೆ. ಕೊಳವೆ ಬಾವಿಗಳ ಮೂಲಕ ನೀರಿನ ಆಶ್ರಯ ರೈತರಿಗೆ ಸುಲಭವಾಗಿ ಲಭ್ಯವಾಗುತ್ತಿರುವುದರಿಂದ, ವಾಣಿಜ್ಯ ಬೆಳೆಗಳಾದ ದಾಳಿಂಬೆ, ಮೆಡಿಸಿನ್ ಸೌತೆ ಮುಂತಾದವುಗಳನ್ನು ಬೆಳೆಯುತ್ತಿದ್ದಾರೆ.

**ನೀರಾವರಿ ವ್ಯವಸ್ಥೆ**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಯಾವುದೇ ನದಿಪಾತ್ರಗಳು ಕಂಡುಬರುವುದಿಲ್ಲ. ಆದ್ದರಿಂದ ಕಣಕಟ್ಟೆ ಹೋಬಳಿ ಪ್ರದೇಶಗಳಲ್ಲಿ ಕೆರೆಗಳು, ಬಾವಿಗಳು ಪ್ರಮುಖವಾದ ಪಾತ್ರವನ್ನು ವಹಿಸಿದ್ದವು. ಕೆರೆಗಳ ನಿರ್ಮಾಣವು ಧಾರ್ಮಿಕ ಮತ್ತು ರಾಜಕೀಯ ಮನೋಭಾವದಲ್ಲಿ ಪ್ರಧಾನ ಪಾತ್ರವಹಿಸಿರುವುದನ್ನು ಈ ಪರಿಸರದ ಶಾಸನಗಳಿಂದ ತಿಳಿಯಬಹುದು. ಕಣಕಟ್ಟೆಯಲ್ಲಿ ಚಟ್ಟ ಬೋವನೆಂಬುವವನು ನೀಲೀಶ್ವರ ದೇವಾಲಯ ಕಟ್ಟಿಸಿ ಲಿಂಗಪ್ರತಿಷ್ಠೆ ಮಾಡಿ ಕೆರೆಯನ್ನು ಕಟ್ಟಿಸಿದ್ದಾನೆ. ಅಲ್ಲದೆ ಕಣಕಟ್ಟೆಯಲ್ಲಿ ಎಲ್ಲಾ ಜಗತಿ ಕೊತ್ತಳಿಗಳೂ ಸೇರಿ ಜಗತೀಶ್ವರ ದೇವಾಲಯ ವನ್ನು ಒಂದು ಕೆರೆಯನ್ನು ನಿರ್ಮಿಸಿದ್ದಾರೆ. ಅಲ್ಲದೆ ಇವರು ಶಂಕರನಹಳ್ಳಿ, ಸೋಮಶೆಟ್ಟಿಹಳ್ಳಿ ಗ್ರಾಮಗಳಲ್ಲಿಯೂ ಕೆರೆ ನಿರ್ಮಾಣ ಮತ್ತು ನಿರ್ವಹಣೆಗೆ ವಿಶೇಷ ಗಮನ ನೀಡಿದ್ದಾರೆ.[೪೧] ಹಲಕೂರಿನ ಮಹಾಪ್ರಭುಗಳು ಕೆರೆಗಳನ್ನು ಕಟ್ಟಿಸುವುದರಲ್ಲಿ ಪ್ರಮುಖರಾಗಿದ್ದರು. ಅದಕ್ಕೆ ಸಾಕ್ಷಿಯಾಗಿ ಆ ಗ್ರಾಮದಲ್ಲಿ ಆರು ಕೆರೆಗಳನ್ನು ಶಾಸನಗಳು ಉಲ್ಲೇಖಿಸಿವೆ.[೪೨] ಕೆರೆಗಳನ್ನು ಮಳೆಗಾಲದಲ್ಲಿ ದೊರೆಯುವ ನೀರಿನ ಮೊತ್ತವನ್ನು ಗಮನದಲ್ಲಿಟ್ಟು ಮಳೆ ನೀರಿನಿಂದ ಒಡೆದು ಹೋಗದಂತೆ ಏರಿಯ ಆಕಾರವನ್ನು ನಿರ್ಮಿಸಲಾಗುತ್ತಿತ್ತು. ಕೋಟೆಯ ಹೊರಗೆ ಅಗಳಿಗೆ ನೀರು ಹರಿಸಲು ಸುಲಭವಾಗುವಂತೆ ಕೆರೆಗಳನ್ನು ನಿರ್ಮಿಸಲಾಗುತ್ತಿತ್ತು ಎಂದು ಕಿತ್ತನಕೆರೆಯ ಶಾಸನವು ತಿಳಿಸುತ್ತದೆ.[೪೩] ಮತ್ತೆ ಕೆಲವು ಗ್ರಾಮಗಳಲ್ಲಿ ಊರ ಮುಂಭಾಗದಲ್ಲಿ ವಿಶಾಲವಾದ ತೋಮು ಕಲ್ಯಾಣಿಗಳಿದ್ದು,

ಅವುಗಳ ಬದಿಗೆ ಕೆರೆಗಳಿವೆ. ಕೆಲವು ಗ್ರಾಮದಿಂದ ತುಸು ದೂರವಾದರೂ ಜಲಾನಯನ ಪ್ರದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಸ್ತಾರವಾದ ಅಂಗಳದೊಂದಿಗೆ ರಚನೆಗೊಂಡಿವೆ. ಈ ಕೆರೆಯ ನೀರಿನ ಮೂಲಕ ಇಲ್ಲಿನ ಜನತೆ ಗದ್ದೆ, ಬೆದ್ದಲು ಮತ್ತು ತೋಟಗಳಿಗೆ ನೀರನ್ನು ಹಾಯಿಸಿಕೊಂಡು ಉತ್ತಮವಾದ ಬೆಳಗಳನ್ನು ಬೆಳೆಯುತ್ತಿದ್ದರು.

ಕಣಕಟ್ಟೆಯು ಪ್ರಮುಖವಾಗಿ ವ್ಯಾಪಾರಿ ಕೇಂದ್ರವಾಗಿದ್ದು, ವ್ಯಾರಿವರ್ಗವು ಧನಾರ್ಜನೆ ಧರ್ಮಾರ್ಜನೆಯೊಂದಿಗೆ ಹಾಗೂ ಸೌಖ್ಯವನ್ನೆ ಪಡೆಯಲು ತಾವು ವ್ಯಾಪಾರ ವಹಿವಾಟು ನಡೆಸುವ ಗ್ರಾಮ ಪಟ್ಟಣಗಳಲ್ಲಿ ಸಂತೆ ಮಾಳಗಳಲ್ಲಿ ಬಂದು ಹೋಗುವ ವ್ಯಾಪಾರಿಗಳು ಗ್ರಾಹಕರಿಗೆ ನೀರಿನ ಸಮಸ್ಯೆಯಾಗದಂತೆ ಕೆರೆ ನಿರ್ಮಿಸುವುದು ಛತ್ರವನ್ನು, ಅರವಟ್ಟಿಗೆಗಳನ್ನು ನಿರ್ಮಿಸುವ ಕಾರ್ಯವನ್ನು ಮಾಡಿದ್ದಾರೆ. ಪ್ರಸ್ತುತವಾಗಿ ಈಗ ಮಳೆಯನ್ನಾಧರಿಸಿದ ವ್ಯವಸಾಯದ ಜೊತೆಗೆ ರೈತರು ನೀರಿಗಾಗಿ ಕೊಳವೆ ಬಾವಿಗಳನ್ನು ತೋಡಿಸುತ್ತಿದ್ದಾರೆ. ಇದರಿಂದಾಗಿ ಜನತೆ ಹೆಚ್ಚು ಹೆಚ್ಚು ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಕೊಳವೆ ಬಾವಿಗಳು ಪ್ರಮುಖವಾಗಿ ನೀರಾವರಿ ವ್ಯವಸ್ಥೆಯ ಅಂಗಗಳಾಗಿವೆ.

## ಅಳತೆ ಮತ್ತು ತೂಕ

ಕಣಕಟ್ಟೆಯು ಪ್ರಮುಖ ವ್ಯಾಪಾರೀ ಕೇಂದ್ರವಾಗಿದ್ದು, ಯಾವುದೇ ವಸ್ತುವನ್ನು ಮಾರಾಟ ಮಾಡಲು ಮತ್ತು ಕೊಂಡುಕೊಳ್ಳಲು ನಿರ್ದಿಷ್ಟ ಸ್ಥಳದಲ್ಲಿ ಸಂತೆಗಳು ನಡೆಯುತ್ತಿದ್ದವು. ಇಂತಹ ಸಂತೆಗಳಲ್ಲಿ ವಸ್ತುಗಳನ್ನು ಮಾರಾಟ ಮಾಡಲು, ಕೊಂಡುಕೊಳ್ಳಲು ವಿವಿಧ ಅಳತೆ ಮಾಪನಗಳಿದ್ದವು. ಇಬ್ಬಳ, ಕೊಳಗ, ಬಳ್ಳ, ಖಂಡುಗ, ಮಣ, ಅದ್ದನ, ಮುಂತಾದ ಮಾಪನಗಳಿದ್ದವು ಎಂದು ಇಲ್ಲಿನ ಶಾಸನಗಳು ತಿಳಿಸುತ್ತವೆ.[೪೪] ಹಲಕೂರಿನ ಶಾಸನದಲ್ಲಿ ಕಲಿದೇವರಿಗೆ ಆನೆಕೆರೆಯ ಕೆಳಗೆ ೫ ಕೊಳಗ ಗದ್ದೆ ನೀಡಿರುವುದನ್ನು ಹೇಳಲಾಗಿದೆ. ಹಲಕೂರು ಮತ್ತು ಹೊನ್ನವಳ್ಳಿಯ ನಡುವೆ ಆದ ಭೂ ಪರಿವರ್ತನೆಯಲ್ಲಿ ೭೪ ಮಟ್ಟುನಗಳೆಯಲ್ಲಿ ಅಳೆದ ೪೩೦ ಕಂಬದ ಭೂಮಿ ಎಂದು ಉಲ್ಲೇಖಿಸಲಾಗಿದೆ.[೪೫] ೧೫ ಕೈಯ್ಯಳತೆಯ ಮನೆಯ ದಾನವನ್ನು ಕುರಿತು ಕಣಕಟ್ಟೆ ಶಾಸನ ತಿಳಿಸುತ್ತದೆ. ಅಲ್ಲದೆ ೭೪ ಮಟ್ಟುನಗಳೆ ಎಂಬುದು ಹೆಚ್ಚು ಶಾಸನಗಳಲ್ಲಿ ವ್ಯಕ್ತವಾಗಿದ್ದು, ಇದು ಈ ಪ್ರಾಂತ್ಯದಲ್ಲಿ ಒಪ್ಪಿತ ಅಳತೆ ಮಾಪನವಾಗಿದ್ದಂತೆ ತೋರುತ್ತದೆ. ಮತ್ತು ತೈಲಿಗರು ದೇವರ ನಂದಾದೀವಿಗೆಗೆ ಎಣ್ಣೆ ಸೊಂಟಿಗೆಯ ಬಿಟ್ಟರು ಎಂದು ಹೇಳಿದೆ.[೪೬] ಪ್ರಸ್ತುತವಾಗಿ ಒಂದು ಕೆ.ಜಿ., ಎರಡು ಕೆ.ಜಿ.ಬಟ್ಟುಗಳನ್ನು ತೂಕದ ಮಾಪಕವಾಗಿ ವ್ಯಾಪಾರಿಗಳು ಬಳಸುತ್ತಾರೆ ಮತ್ತು ಲೀಟರ್ ಲೆಕ್ಕದಲ್ಲಿ ಎಣ್ಣೆಯನ್ನು ನೀಡುವುದನ್ನು ಕಾಣುತ್ತೇವೆ.

### ಸಾರಿಗೆ ಸಂಪರ್ಕ

ಕಣಕಟ್ಟೆ ಹೋಬಳಿ ವ್ಯಾಪ್ತಿಯ ಪ್ರದೇಶ ಬಯಲು ಸೀಮೆಯ ಪ್ರದೇಶವಾಗಿದ್ದರಿಂದ ಸಾರಿಗೆ ಸಂಪರ್ಕ ಸುಗಮವಾಗಿತ್ತು. ವಸ್ತುಗಳನ್ನು ಸಾಗಿಸಲು ಗಾಡಿಗಳನ್ನು ಮತ್ತು ಪ್ರಾಣಿಗಳನ್ನು ಬಳಸುತ್ತಿದ್ದರು ಮತ್ತು ಈ ಪ್ರದೇಶದ ಜನರು ಹೆಚ್ಚು ನಡಿಗೆಯ ಮೂಲಕವೇ ಸಂಚರಿಸುವ ಜನರಾಗಿದ್ದರು. ಬಂಡಿ ಅಥವಾ ಗಾಡಿ ಉತ್ತಮ ಸಂಚಾರಿ ವಾಹನವಾಗಿದ್ದಂತೆ ಸರಕು ಹೋರುವ ಸಾಧನವಾಗಿ ಪ್ರಾಚೀನ ಕಾಲದಿಂದಲೂ ಕಂಡುಬರುತ್ತದೆ. ಕಣಕಟ್ಟೆ ಮತ್ತು ಹಲಕೂರು ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿದ್ದು ಅವುಗಳನ್ನು ಬೆಸೆಯುವ ಪಥಗಳು ಕಂಡುಬರುತ್ತವೆ. ಎತ್ತಿನ ಗಾಡಿಯ ಜೊತೆಗೆ ಕುದುರೆ, ಎತ್ತು, ಕತ್ತೆ, ಎಮ್ಮೆ, ಸರಕನ್ನು ಸಾಗಿಸುವ ಸಾಧನಗಳಾಗಿದ್ದವು. ಇತ್ತೀಚೆಗೆ ಬಸ್ಸು, ರೈಲು, ಆಟೋರಿಕ್ಷಾ, ಲಾರಿ, ಟೆಂಪೋ, ಕಾರು ಮುಂತಾದವುಗಳು ಜನರ ವಾಹನಗಳು ಮತ್ತು ಸರಕು ಸಾಕಾಣಿಕೆಯ ವಾಹನಗಳಾಗಿ ಕಾರ್ಯನಿರ್ವಹಿಸುತ್ತವೆ.

### ನಾಣ್ಯ ಪದ್ಧತಿ

ಪ್ರಾರಂಭದಲ್ಲಿ ಸಾಮಾನ್ಯವಾಗಿ ಎಲ್ಲ ಗ್ರಾಮಗಳಲ್ಲಿಯೂ ವಸ್ತು ವಿನಿಮಯ ಪದ್ಧತಿ ಕಂಡುಬರುತ್ತಿತ್ತು. ತಮ್ಮಲ್ಲಿ ಇರುವ ವಸ್ತುಗಳನ್ನು ತಮಗೆ ಬೇಕಾದ ವಸ್ತುಗಳು ಇರುವವರಿಗೆ ನೀಡಿ ಅವರಲ್ಲಿ ಇದ್ದಂತಹ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಮುಂದೆ ಕಾಲಾನಂತರದಲ್ಲಿ ನಾಣ್ಯ ಪದ್ಧತಿ ಕಾಣಿಸಿಕೊಂಡಿತು. ಒಂದು ಪ್ರದೇಶದಲ್ಲಿ ಬಳಕೆಯಾಗುತ್ತಿದ್ದ ನಾಣ್ಯಗಳಿಂದ ಆ ಪ್ರದೇಶದ ಆರ್ಥಿಕ ಪ್ರಗತಿಯ ಪ್ರತಿಬಿಂಬವನ್ನು ತಿಳಿಯಬಹುದು. ಸಾಮಾನ್ಯವಾಗಿ ಬಳಕೆಯಾಗುತ್ತಿದ್ದ ನಾಣ್ಯಗಳೆಂದರೆ ಕಾಸು, ಆಣೆ, ಗದ್ಯಾಣ, ವರಹಾ ಕಂಡುಬರುತ್ತವೆ. ಇವುಗಳ ಆಗಿನ ಕಾಲದ ಆರ್ಥಿಕ ಸ್ಥಿತಿಗತಿಯ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡುತ್ತವೆ. ಇತ್ತೀಚೆಗೆ ಕೂಡ ರೈತರಲ್ಲಿ ವಸ್ತುವಿನಿಮಯ ಪದ್ಧತಿ ಕಂಡುಬರುತ್ತದೆ. ಕಾಸು ಮತ್ತು ಆಣೆ ವ್ಯವಹಾರ ನಿಂತು ಹೋಗಿ ರೂಪಾಯಿ ವ್ಯವಹಾರ ಕಂಡುಬರುತ್ತದೆ.

### ವ್ಯಾಪಾರ ಮತ್ತು ವಾಣಿಜ್ಯ

ಕಣಕಟ್ಟೆ ಹೋಬಳಿಯು ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದರಿಂದ ಅದು ಅನೇಕ ಪ್ರದೇಶಗಳೊಂದಿಗೆ ವಾಣಿಜ್ಯ ವ್ಯವಹಾರ ಹೊಂದಿತ್ತು. ಕಣಕಟ್ಟೆಯು ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದು, ವಲಸಿಗ ವ್ಯಾಪಾರಿಗಳ ಪ್ರಮುಖ ಕೇಂದ್ರವಾಗಿತ್ತು. ಇದಲ್ಲದೆ ಸುತ್ತಮುತ್ತಲ ಪರಿಸರದಲ್ಲಿ ಕಂಡುಬರುವ ಅರಸೀಕೆರೆ, ಬಾಣಾವರ, ಜಾವಗಲ್ಲು, ಹುಳಿಯಾರು, ಚೆಲ್ಲಾಪುರ, ಹಾರನಹಳ್ಳಿ, ಬೇಲೂರು ಈ ಕೆಲವು ಪ್ರದೇಶಗಳು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು.

ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಕಣಕಟ್ಟೆ ಮತ್ತು ಹಲಕೂರು ಪ್ರದೇಶಗಳು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ವಿವಿಧ ಗ್ರಾಮಗಳಲ್ಲಿ ನಡೆಯುತ್ತಿದ್ದ ಸಂತೆಗಳಲ್ಲಿ ಅಗತ್ಯ ವಸ್ತುಗಳನ್ನು ಕೊಂಡುಕೊಂಡು ಆ ಗ್ರಾಮೀಣ ಪ್ರದೇಶಗಳಿಗೆ ಅಗತ್ಯ ವಸ್ತುಗಳನ್ನು ಪೂರೈಸುತ್ತಿದ್ದರು. ಇದರಲ್ಲಿ ಸಂತೆಗಳು ವ್ಯಾಪಾರ ವಹಿವಾಟಿನ ಪ್ರಮುಖ ಜಾಲಗಳಾಗಿದ್ದವು.

ಹೆಚ್ಚು ರೈತರನ್ನು ವ್ಯಾಪಾರಿಗಳನ್ನು ಹೊಂದಿರುವ ಕಣಕಟ್ಟೆ ಹೋಬಳಿಯು ಅಂದು ವ್ಯಾಪಾರಿ ಕೇಂದ್ರವಾಗಿದ್ದು, ಇಂದಿಗೂ ಕೂಡ ಉತ್ತಮ ವ್ಯಾಪರ ವಹಿವಾಟು ನಡೆಸುತ್ತಿದೆ. ಭತ್ತ, ರಾಗಿ, ದ್ವಿದಳ ಧಾನ್ಯಗಳು, ಅಡಿಕೆ, ಕೊಬ್ಬರಿ ಮುಂತಾದ ವ್ಯಾಪಾರ ನಡೆಯುತ್ತದೆ. ಕಲ್ಲು ಸಾದರಹಳ್ಳಿಯು ಪ್ರಮುಖವಾಗಿ ಹಸುಗಳ ವ್ಯಾಪಾರ ಕೇಂದ್ರವಾಗಿದೆ. ಇಲ್ಲಿ ತಿಂಗಳಿಗೊಮ್ಮೆ ಹಸುಗಳನ್ನು ಸಂತೆಮಾಳಗಳಲ್ಲಿ ತಂದು ಇರಿಸುತ್ತಾರೆ. ಸುತ್ತಮುತ್ತಲ ಪ್ರದೇಶದ ಜನರು ಬಂದು ಇಲ್ಲಿ ಹಸುಗಳನ್ನು ಮತ್ತು ಎತ್ತುಗಳನ್ನು ಕೊಂಡುಕೊಳ್ಳುತ್ತಾರೆ. ಇದಲ್ಲದೆ ಕುರಿ ವ್ಯಾಪಾರವು ಈ ಪ್ರದೇಶದಲ್ಲಿ ಹೆಚ್ಚು ಪ್ರವರ್ಧಮಾನಕ್ಕೆ ಬಂದಿದೆ. ವ್ಯಾಪಾರಿಗಳು ಸ್ಥಳೀಯವಾಗಿಯೇ ಹೆಚ್ಚು ವಸ್ತುಗಳನ್ನು ವ್ಯಾಪಾರ ಮಾಡುತ್ತಾರೆ. ಇತ್ತೀಚೆಗೆ ವಾಣಿಜ್ಯ ಬೆಳೆಗಳಾದ ದಾಳಿಂಬೆ, ಮಡಿಸಿನ್ ಚೌತೆ ಮುಂತಾದ ಬೆಳೆಗಳನ್ನು ರೈತರು ಹೆಚ್ಚಾಗಿ ಬೆಳೆಯುತ್ತಿದ್ದು ಇವುಗಳನ್ನು ಹೊರದೇಶಕ್ಕೆ ರಫ್ತು ಮಾಡಲಾಗುತ್ತದೆ. ಅಡಿಕೆ, ತೆಂಗು ಹೆಚ್ಚು ಉತ್ಪಾದನೆಯನ್ನು ಹೊಂದಿದ್ದು ರೈತರಿಗೆ ಆರ್ಥಿಕವಾಗಿ ಹೆಚ್ಚು ಭದ್ರತೆಯನ್ನು ಒದಗಿಸುತ್ತದೆ. ಸ್ಥಳೀಯ ಮಟ್ಟದಲ್ಲಿ ನಡೆಯುವ ಸಂತೆಗಳು ಇಂದಿಗೂ ಕೂಡ ವ್ಯಾಪಾರಕ್ಕೆ ಅನುಕೂಲ ಮಾಡಿಕೊಟ್ಟಿವೆ.

### ಕೃಷಿಯೇತರ ಕಸುಬುಗಳು

ಕಣಕಟ್ಟೆ ಹೋಬಳಿಯು ಕೃಷಿಯೇತರ ಕಸುಬುಗಳಿಗೆ ಅನುಕೂಲಕರವಾದ ಮೂಲಭೂತ ಸೌಲಭ್ಯಗಳನ್ನು ಹೊಂದಿದ್ದಿತು. ಪಶುಪಾಲನೆ ಮಾನವ ತನ್ನ ಅಲೆಮಾರಿ ಜೀವನವನ್ನು ಬಿಟ್ಟು ನೆಲೆನಿಲ್ಲಲು ಪ್ರಾರಂಭಿಸಿದಾಗಿನಿಂದ ಪಶುಪಾಲನೆ ಕಂಡುಬರುತ್ತದೆ. ಇದು ಅಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಜನರು ಅನೇಕ ಸಾಕು ಪ್ರಾಣಿಗಳನ್ನು ಸಾಕುತ್ತಿದ್ದರು. ಕುರಿ, ಮೇಕೆ, ಕೋಣ ಎಮ್ಮೆ, ಎತ್ತು, ಹಸುಗಳು ಮುಂತಾದ ಪ್ರಾಣಿಗಳ ಸಾಕಾಣಿಕೆಗೆ ಉತ್ತೇಜನ ನೀಡಿದ್ದರು. ವಿಶೇಷವಾಗಿ ಕುರಿಗಳ ಸಾಕಾಣಿಕೆಗೆ ಹಸುಗಳ ಸಾಕಾಣಿಕೆಗೆ ಹೆಚ್ಚು ಆದ್ಯತೆ ನೀಡಿದ್ದರು. ಇತ್ತೀಚೆಗೆ ಈ ಪ್ರದೇಶದಲ್ಲಿ ಹಂದಿ ಹಸುಗಳ ಸಾಕಾಣಿಕೆ ಹೆಚ್ಚು ಕಂಡುಬರುತ್ತಿದ್ದು, ಇದರಿಂದ ಹೆಚ್ಚು ಹಾಲು ಉತ್ಪಾದನೆಯಾಗುವುದರಿಂದ ಇದನ್ನು ಮಾರಾಟ ಮಾಡುವುದರಿಂದ ಜನತೆ ಆರ್ಥಿಕವಾಗಿ ಸುಭದ್ರತೆಯನ್ನು ಹೊಂದುತ್ತಿದ್ದಾರೆ.

ಇದಲ್ಲದೆ ಈ ಪ್ರದೇಶದಲ್ಲಿ ಕುಂಬಾರಿಕೆ, ಕಮ್ಮಾರಿಕೆ ಮತ್ತು ಮನೆಗೆಲಸ ಮಾಡುವವರು ಅಂದರೆ ಬಡಗಿಗಳು ಕಂಡುಬರುತ್ತಾರೆ. ಈಗಲೂ ಸಹ ಈ ಪ್ರದೇಶದಲ್ಲಿ ಮಡಕೆಗಳಲ್ಲಿ ಅಂದರೆ ಮಣ್ಣಿನ ಪಾತ್ರೆಗಳಲ್ಲಿ ಅಡಿಗೆ ಮಾಡುವ ವ್ಯವಸ್ಥೆ ಅಸ್ತಿತ್ವದಲ್ಲಿದ್ದು, ಕುಂಬಾರಿಕೆಯು ಈಗಲೂ ಅಸ್ತಿತ್ವದಲ್ಲಿದೆ ಮತ್ತು ಕಮ್ಮಾರರು ಇಲ್ಲಿನ ರೈತರಿಗೆ ಬೇಕಾದ ಕೃಷಿ ಉಪಕರಣಗಳನ್ನು ತಯಾರಿಸಿಕೊಡುತ್ತಾರೆ. ಇದನ್ನು ಅವರು ಹಿಂದಿನಿಂದಲೂ ಮಾಡಿಕೊಂಡು ಬಂದಿದ್ದು, ಈಗಲೂ ಸಹ ಅದು ಮುಂದುವರೆದುಕೊಂಡು ಬಂದಿದೆ.

**ಅಡಿಟಿಪ್ಪಣಿಗಳು**

೧. ಭೈರಪ್ಪ ಕೆ., **ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ,** ಪು.೬೩೪

೨. ಭೈರಪ್ಪ ಕೆ., **ಭಾರತದ ಸಮಾಜ ಪರಂಪರೆ ಮತ್ತು ಪರಿವರ್ತನೆ,** ಪು.೮೪

೩. ಎಪಿಗ್ರಾಫಿಯಾ ಕರ್ನಾಟಿಕ(ಪರಿಷ್ಕೃತ), ಸಂ.೧೦ ಶಾ.ಸಂ.೯೦, ಪು.೧೧೮-೧೨೦

೪. ಅದೇ, ಶಾ.ಸಂ.೯೨, ೯೫, ಪು.೧೨೫-೧೩೧

೫. ಅದೇ, ಶಾ.ಸಂ.೧೧೩, ಪು.೧೪೨-೧೪೭

೬. ಅದೇ

೭. ಲಲಿತಾಂಬ ಎನ್.ಆರ್., **ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ,** ಪು.೮೫

೮. ಎ.ಕ.(ಪರಿಷ್ಕೃತ), ಪೂರ್ವೋಕ್ತ, ಶಾ.ಸಂ.೮೮, ಪು.೧೧೩-೧೧೭

೯. ಅದೇ,

೧೦. ಅದೇ ಶಾ.ಸಂ.೯೫, ಪು.೧೨೪-೧೨೫

೧೧. ಅದೇ,

೧೨. ಅದೇ, ಶಾ.ಸಂ.೧೨೧, ಪು.೧೫೯-೧೬೦

೧೩. ಅದೇ, ಶಾ.ಸಂ.೧೨೬, ಪು.೧೬೪

೧೪. ಅದೇ, ಶಾ.ಸಂ.೮೮, ಪು.೧೧೩-೧೧೭

೧೫. ಕರ್ನಾಟಕದ ಪರಂಪರೆ, ಸಂ.೧, ಪು.೩೯೫

೧೬. ತಿಪ್ಪೇರುದ್ರಸ್ವಾಮಿ ಹೆಚ್., ಪು.೨೧೭

೧೭. ಅದೇ, ಪು.೪೫೨

೧೮. ಎ.ಕ.(ಪರಿಷ್ಕೃತ), ಪೂರ್ವೋಕ್ತ, ಶಾ.ಸಂ.೯೭, ಪು.೧೩೧–೧೩೨

೧೯. ಅದೇ, ಶಾ.ಸಂ.೯೭

೨೦. ಅದೇ, ಶಾ.ಸಂ.೧೧೩, ಪು.೧೪೨–೧೪೭

೨೧. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.೧೩೮

೨೨. ಎ.ಕ.(ಪರಿಷ್ಕೃತ), ಶಾ.ಸಂ.೯೬, ಪು.೧೩೮

೨೩. ಅದೇ, ಶಾ.ಸಂ.೯೫, ಪು.೧೨೪–೧೨೫

೨೪. ಅದೇ,

೨೫. ಅದೇ, ಶಾ.ಸಂ.೯೨, ಪು.೧೨೧–೧೨೨

೨೭. ಅದೇ, ಶಾ.ಸಂ.೧೧೬, ಪು.೧೫೧–೧೫೨

೨೯. ಅದೇ, ಶಾ.ಸಂ.೮೮, ಪು.

೩೦. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೮೦–೧೮೧

೩೧. ಅದೇ, ಪು.೧೮೨

೩೨. ಲಲಿತಾಂಬ ಎನ್.ಆರ್., ಪೂರ್ವೋಕ್ತ, ಪು.೨೨೬

೩೩. ಎ.ಕ.(ಪರಿಷ್ಕೃತ), ಪೂರ್ವೋಕ್ತ ಶಾ.ಸಂ.೧೧೯, ಪು.೧೫೬

೩೪. ಅದೇ, ಶಾ.ಸಂ.೧೧೩, ಪು.೧೪೨

೩೫. ಅದೇ,

೩೬. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೭೩

೩೭. ಎ.ಕ.(ಪರಿಷ್ಕೃತ), ಪೂರ್ವೋಕ್ತ, ಶಾ.ಸಂ.೬೭, ಪು.೯೫–೯೮

೩೮. ಅದೇ, ಶಾ.ಸಂ.೯೨, ಪು.೧೨೧–೧೨೨

೩೯. ಲಲಿತಾಂಬ ಎನ್.ಆರ್., ಪೂರ್ವೋಕ್ತ, ಪು.೨೪೩–೨೪೪

೪೦. ಎ.ಕ.(ಪರಿಷ್ಕೃತ), ಶಾ.ಸಂ.೮೬, ಪು.೧೦೮–೧೧೦

೪೧. ಅದೇ, ಶಾ.ಸಂ.೮೮, ಪು.೧೧೩-೧೧೭

೪೨. ಅದೇ, ಶಾ.ಸಂ.೯೬, ಪು.೧೨೬-೧೩೧

೪೩. ಅದೇ, ಶಾ.ಸಂ.೧೧೩, ಪು.೧೪೨-೧೪೭

೪೪. ಲಲಿತಾಂಬ ಎನ್.ಆರ್., ಪೂರ್ವೋಕ್ತ, ಪು.೨೪೩-೨೪೪

೪೫. ಎ.ಕ.(ಪರಿಷ್ಕೃತ), ಪೂರ್ವೋಕ್ತ, ಶಾ.ಸಂ.೯೬, ಪು.೧೨೬-೧೩೧

೪೬. ಅದೇ, ಶಾ.ಸಂ.೮೧, ಪು.೧೦೩

ಅಧ್ಯಾಯ ಐದು

# ನಂಬಿಕೆ ಮತ್ತು ಆಚರಣೆಗಳು

## ೫.೧. ನಂಬಿಕೆ, ಆಚರಣೆಗಳು ಮತ್ತು ಐತಿಹ್ಯಗಳು

ನಮ್ಮ ಭೌತಿಕ ಜಗತ್ತು ವಿವಿಧ ರೀತಿಯ ವಸ್ತುಗಳಿಂದ ಆಗಿದೆ. ಈ ವಸ್ತುಗಳ ಸೃಷ್ಟಿಗೆ ಮೂಲ ಕೆಲವೇ ಮೂಲವಸ್ತುಗಳು ಮೂಲ ಆಧಾರವಾಗುತ್ತವೆ. ಈ ಮೂಲ ವಸ್ತುಗಳು ಇಲ್ಲದಿದ್ದರೆ ಭೌತಿಕ ಜಗತ್ತು ಕುಸಿದು ಬೀಳುತ್ತದೆ. ಇದೇ ರೀತಿಯಲ್ಲಿ ಸಮಾಜ ಆರಂಭವಾಗುತ್ತದೆ. ಈ ಬದುಕುವ ನಂಬಿಕೆಯಿಂದ ಸಮಾಜ ಆರಂಭವಾಗುತ್ತದೆ. ಈ ಬದುಕುವ ನಂಬಿಕೆ ಬಂದ ಮೇಲೆ ಮನುಷ್ಯ ತನ್ನ ಬದುಕಿಗೆ ಬೇಕಾದ ಇತರ ಪರಿಕರಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ಮಾನವ ಸಮಾಜದ ಅಸ್ತಿತ್ವಕ್ಕೆ ಈ ನಂಬಿಕೆ ಮೂಲವಸ್ತು. ಈ ನಂಬಿಕೆಯನ್ನು ಆಧಾರವಾಗಿಟ್ಟು ಕೊಂಡು ಮಾನವ ಸಮಾಜದ ಇತರ ಅಂಶಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ನಂಬಿಕೆಯಲ್ಲಿ ಒಳ್ಳೆಯದು, ಕೆಟ್ಟದ್ದು ಎನ್ನುವ ಆಲೋಚನೆ ಚಾರಿತ್ರಿಕ ಪರಿಣಾಮ, ಬಾಳಿಗೊಂದು ನಂಬಿಕೆ ಬೇಕು ಎನ್ನುವ ಅಂಶ ಯಾವಾಗಲೂ ಸ್ಪಷ್ಟ. ನಂಬಿಕೆ ಮಾನವ ಸಮಾಜದ ಮೂಲಪೇಕ್ಷೆಯಾದ 'ಮೌಲ್ಯ' ಮತ್ತು ತತ್ವಚಿಂತನೆಗೆ ತಳಹದಿ. ಒಂದು ನಂಬಿಕೆ ಮೌಲ್ಯವಾಗುವ ಮೂಲಕ ಒಂದು ಜನಪದ ಸೃಷ್ಟಿಯಾಗುತ್ತದೆ. ಆ ಜನಪದಕ್ಕೊಂದು ಧರ್ಮ ಮತ್ತು ದೇವರುಗಳು ಬರುತ್ತವೆ. ಈ ನಂಬಿಕೆಯ ಮುಂದುವರಿಕೆಗಾಗಿ ಆಚರಣೆ ಅನುಷ್ಠಾನಗಳು ಉಂಟಾಗುತ್ತದೆ. ಹೀಗೆ ಮಾನವ ಬದುಕಿನ ಸ್ಥಾಪನೆ ನಂಬಿಕೆಯಲ್ಲಿದೆ. ಹೀಗೆ ಸಮಾಜದಲ್ಲಿ ನಂಬಿಕೆಗಳು ಬದುಕನ್ನು ವ್ಯವಸ್ಥೆಗೊಳಿಸಿಕೊಳ್ಳಲು ಕಾರಣವಾಗುತ್ತದೆ. ಆ ಮೂಲಕ ಮನುಷ್ಯ ಮನುಷ್ಯರ ಮಧ್ಯೆ ಮತ್ತು ಪರಿಸರದ ಮಧ್ಯೆ ಸಂಬಂಧ ಕಲ್ಪಿಸುತ್ತವೆ. ಸಮಾಜದಲ್ಲಿ ನಂಬಿಕೆಗಳು ಕಟ್ಟು ಕತೆಗಳು, ಹಿತನುಡಿಗಳಾಗಿರದೆ ಬದುಕಿನ ನೆರಳಾಗಿರುತ್ತವೆ.[೧] ಈ ನಂಬಿಕೆಗಳು ಕ್ರಿಯೆಯ ಮೂಲಕ ಆಚರಣೆಗಳಾಗಿ ಜನಪದ ಸಮುದಾಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡವು. ಜನರ ಬದುಕಿನಲ್ಲಿ ಆಚರಣೆಗಳು ಅವಿಭಾಜ್ಯ ಅಂಗಗಳಾಗಿವೆ. ಅವು ಕಾಲಮಾನಕ್ಕೆ ತಕ್ಕ ಹಾಗೆ

ಬದಲಾವಣೆಗೊಳ್ಳುತ್ತಾ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ನಿರಂತರವಾಗಿ ಸಾಗಿ ಬಂದಿವೆ. ಮನುಷ್ಯ ತಾನು ನಡೆಸಿಕೊಂಡು ಬಂದ ವಿಶಿಷ್ಟ ಆಚರಣೆಗಳ ಬಗ್ಗೆ ಹೊಂದಿದ ಶ್ರದ್ಧೆ, ಉತ್ಸಾಹ ನಂಬಿಕೆಗಳು ತಲೆಮಾರಿನಿಂದ ತಲೆಮಾರಿಗೆ ಹರಿಯುತ್ತಾ ಬಂದವು. ಇವು ಸಮಾಜದ ಕಟ್ಟು ಕಟ್ಟಳೆಗಳಿಗೆ ಬದ್ಧವಾಗಿ ನಡೆದುಕೊಳ್ಳುವುದರಿಂದ ಇವುಗಳಿಂದ ಹೊರತಾಗಿರಲು ಸಾಧ್ಯವಿಲ್ಲ.[೨] ಪ್ರಸ್ತುತ ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಅನೇಕ ನಂಬಿಕೆ ಮತ್ತು ಆಚರಣೆಗಳು ಕಂಡುಬರುತ್ತವೆ.

**ಶಶಿವಾಳದಲ್ಲಿ ನಡೆಸುವ ಕುಂಬಾಭಿಷೇಕ ಕುರಿತ ನಂಬಿಕೆ ಮತ್ತು ಆಚರಣೆ**

ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಶಶಿವಾಳ ಗ್ರಾಮದಲ್ಲಿ ಕುಂಬಾಭಿಷೇಕ ಮತ್ತು ಗಂಗಮ್ಮನ ಪೂಜೆ ಎನ್ನುವ ವಿಶೇಷ ಆಚರಣೆ ಮಾಡುವುದನ್ನು ಕಾಣುತ್ತೇವೆ. ಈ ಗ್ರಾಮದಲ್ಲಿ ಗೌರಿಗಣೇಶನ ಹಬ್ಬವಾಗಿ ಇಪ್ಪತ್ತೊಂದನೆ ದಿನಕ್ಕೆ ಊರಿನ ದೇವರಾದ ಬಸವೇಶ್ವರಸ್ವಾಮಿ ಮತ್ತು ಗ್ರಾಮದೇವತೆಯಾದ ಹೊಳಲ್ಕೆರೆ ಅಮ್ಮನವರ ಸಮ್ಮುಖದಲ್ಲಿ ಇದೇ ಗ್ರಾಮದಲ್ಲಿ ಇರುವ ಗಂಗಮ್ಮನ ಬಾವಿಯ ಹತ್ತಿರ ಊರಿನ ಜನರೆಲ್ಲಾ ತೆರಳುತ್ತಾರೆ ಮತ್ತು ಅಲ್ಲಿ ನೂರಾ ಒಂದು ಕುಂಬವನ್ನು ಕಳಸದ ರೂಪದಲ್ಲಿ ಪೂಜಿಸುತ್ತಾರೆ. ಅಂದರೆ ಕುಂಭದೊಳಗೆ ನೀರನ್ನು ತುಂಬಿ ಮೇಲೆ ಎಲೆ ಇಟ್ಟು ಅದರ ಮೇಲೆ ಕಾಯಿಯನ್ನು ಇಟ್ಟು ಕಳಶವನ್ನು ಮಾಡುತ್ತಾರೆ. ಇಲ್ಲೇ ಇರುವ ಕಲ್ಯಾಣಿಯಿಂದ ನೀರನ್ನು ತಂದು ಕುಂಬಗಳಿಗೆ ತುಂಬುತ್ತಾರೆ. ನಂತರ ಈ ಕಳಶಗಳಿಗೆಲ್ಲ ಪೂಜೆ ಮಾಡುತ್ತಾರೆ. ನಂತರದಲ್ಲಿ ಇದರಲ್ಲಿನ ಎರಡು ಕಳಶದ ನೀರಿನಲ್ಲಿ ದೇವರಿಗೆ ಅಭಿಷೇಕ ಮಾಡುತ್ತಾರೆ. ಮತ್ತೆ ಈ ಕುಂಬಗಳ ಸಮೇತ ಊರನ್ನು ಒಂದು ಸುತ್ತು ಹಾಕುತ್ತಾರೆ. ನಂತರ ಕಳಶಗಳನ್ನು ದೇವಾಲಯಕ್ಕೆ ತರುತ್ತಾರೆ. ಈ ರೀತಿಯಲ್ಲಿ ತಂದ ನೀರಿನಿಂದ ಮುಂದೆ ದೇವರಿಗೆ ಅಭಿಷೇಕ ಮಾಡುತ್ತಾರೆ. ಹಾಗಾಗಿ ಇದನ್ನು ಕುಂಬಾಭಿಷೇಕ ಎನ್ನುತ್ತಾರೆ. ಇಲ್ಲಿ ಗಂಗಮ್ಮ ದೇವಿಯ ಬಾವಿಯು ಪ್ರತ್ಯೇಕವಾಗಿದ್ದು, ಇದನ್ನು ಪೂಜೆ ಮಾಡಿದರೆ ಒಳ್ಳೆಯದು ಮತ್ತು ಕುಂಬಾಭಿಷೇಕಕ್ಕೆ ಇಲ್ಲಿಯೇ ನೀರನ್ನು ತುಂಬಿಸಬೇಕು ಎನ್ನುವ ನಂಬಿಕೆ ಈ ಜನರಲ್ಲಿ ಮನೆ ಮಾಡಿದೆ. ಈ ರೀತಿ ಮಾಡುವುದರಿಂದ ಮಳೆ ಚೆನ್ನಾಗಿ ಆಗುತ್ತದೆ. ಯಾವುದೇ ಕಾಲಕ್ಕೂ ನೀರಿಗೆ ಬರ ಬರುವುದಿಲ್ಲ ಎಂದು ಈ ಜನರು ನಂಬಿ ಇದನ್ನು ಆಚರಣೆ ಮಾಡುತ್ತಾರೆ. ಈ ಪೂಜೆಯನ್ನು ಲಿಂಗಾಯಿತ ಸಮುದಾಯದವರು ಮಾತ್ರ ಮಾಡುತ್ತಾರೆ. ಆದರೆ ನೋಡಲು ಸುತ್ತಮುತ್ತಲಿನ ಬೇರೆ ಜನಾಂಗದವರು ಆಗಮಿಸಿರುತ್ತಾರೆ.[೩]

**ಸೋಮಶೆಟ್ಟಿಹಳ್ಳಿಯ ಮಲ್ಲೇದೇವರ ಕೆಂಡ ಉತ್ಸವ ಆಚರಣೆ**

ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಸೋಮಶೆಟ್ಟಿಹಳ್ಳಿಯಲ್ಲಿ ಮಲ್ಲೇದೇವರ ಕೆಂಡೋತ್ಸವ ಮತ್ತು ಈಚಲಮರದಮ್ಮನ ದುಗ್ಗಳ ಸೇವೆಯ ವಿಶೇಷ ಆಚರಣೆ ನಡೆಯುತ್ತದೆ. ಇಲ್ಲಿ ಶಿವರಾತ್ರಿ

ಆಗಿ ೧೫ನೇ ದಿನಕ್ಕೆ ಈ ಕೆಂಡ ಹಾಯುವ ಕಾರ್ಯಕ್ರಮವನ್ನು ಇಟ್ಟುಕೊಳ್ಳುತ್ತಾರೆ. ಇದಕ್ಕೆ ಗಂಗನಹಳ್ಳಿ ಚೌಡೇಶ್ವರಿ, ಕಲ್ಲುಗುಂಡಿ ವೀರಭದ್ರಸ್ವಾಮಿ, ಕಲ್ಲೋಡಮ್ಮ, ಮಲ್ಲೇದೇವರು ಎಲ್ಲಾ ದೇವರುಗಳನ್ನು ಕರೆತರುತ್ತಾರೆ ಮತ್ತು ಊರಿನ ಹೊರಗೆ ದೇವರ ತೋಟವೆಂದು ಇದ್ದು, ಇದು ದೇವರಿಗೆ ಮಾತ್ರ ಮೀಸಲಾಗಿರುತ್ತದೆ. ಈ ತೋಟದಲ್ಲಿ ಸುಮಾರು ೫–೬ ಅಡಿ ಉದ್ದ ಮತ್ತು ೩–೪ ಅಡಿ ಅಗಲದಲ್ಲಿ ಕೆಂಡವನ್ನು ಮಾಡುತ್ತಾರೆ. ಮೇಲಿನ ಎಲ್ಲಾ ದೇವರುಗಳ ಮತ್ತು ಊರಿನ ಗ್ರಾಮಸ್ಥರೆಲ್ಲ ಎಲ್ಲ ಸಮುದಾಯದವರಿಗೆ ಮತ್ತು ಸುತ್ತಮುತ್ತಲಿನ ಊರುಗಳಾದ ಮುತ್ತಣ್ಣಗೆರೆ, ಕಲ್ಲುಗುಂಡಿ, ಮಾಗೇನಹಳ್ಳಿ ಬೊಮ್ಮನಹಳ್ಳಿ ಮುಂತಾದ ಊರುಗಳ ಜನರೆಲ್ಲ ಅಲ್ಲಿ ಸೇರುತ್ತಾರೆ. ಮೊದಲು ಈ ಕೆಂಡವನ್ನು ಗಂಡು ದೇವರುಗಳು ತುಳಿದುಕೊಂಡು ಹೋಗುತ್ತವೆ. ನಂತರ ಹೆಣ್ಣು ದೇವತೆಗಳು ತುಳಿಯುತ್ತವೆ ಮತ್ತು ವಿವಾಹವಾಗದೇ ಇರುವ ಹುಡುಗಿಯರು ಈ ದಿನ ಉಪಾಸವಿದ್ದು ಕಳಸವವನ್ನು ಹೊತ್ತುಕೊಂಡು ಬಂದು ಸಾಯಂಕಾಲ ೬ ಗಂಟೆಯ ವರೆಗೂ ಇದ್ದು ಈ ಕೆಂಡವನ್ನು ತುಳಿದುಕೊಂಡು ಹೋಗುತ್ತಾರೆ. ನಂತರ ಇಷ್ಟವಿದ್ದವರು ಈ ಕೆಂಡವನ್ನು ತುಳಿಯಬಹುದಾಗಿರುತ್ತದೆ. ಇಂದಿನ ರಾತ್ರಿ ಪರುವು ನಡೆಯುತ್ತದೆ. ೧೬ನೇ ದಿನ ಈಚಲ ಮರದಮ್ಮನಿಗೆ ದುಗ್ಗಳ ಸೇವೆ ನಡೆಯುತ್ತದೆ. ಇಲ್ಲಿ ಊರಿನ ಹೆಣ್ಣುಮಕ್ಕಳು, ಸೊಸೆಯಂದಿರು ಒಟ್ಟು ೧೦೧ ದುಗ್ಗಳವನ್ನು ಹೊರುತ್ತಾರೆ. ದುಗ್ಗಳವೆಂದರೆ ಒಂದು ಮಣ್ಣಿನ ಮಡಿಕೆಯಲ್ಲಿ ಕರ್ಪೂರವನ್ನು ಹಚ್ಚಿಕೊಂಡು ತಲೆಯ ಮೇಲೆ ಇಟ್ಟುಕೊಂಡು ಈಚಲಮ್ಮನ ಗುಡಿಯವರೆಗೆ ಹೋಗುವುದು. ನಂತರ ಈ ದುಗ್ಗಳದಿಂದ ದೇವಿಗೆ ಪೂಜೆ ಮಾಡುವುದು. ಈ ರೀತಿ ಕೆಂಡ ಹಾಯುವುದು ಮತ್ತು ದುಗ್ಗಳ ಸೇವೆಯು ಪ್ರತಿವರ್ಷವು ನಡೆಯುತ್ತಿದ್ದು, ಇದೊಂದು ಪ್ರಮುಖ ಆಚರಣೆಯಾಗಿದ್ದು, ಇದನ್ನು ಮಾಡುವುದರಿಂದ ಗ್ರಾಮವು ಉದ್ಧಾರವಾಗುತ್ತದೆ. ಅಂದರೆ ಗ್ರಾಮದ ಜನತೆ ಉತ್ತಮ ಸ್ಥಿತಿಗತಿಯನ್ನು ಹೊಂದಿ ಆರ್ಥಿಕವಾಗಿ ಬಲಿಷ್ಠರಾಗುತ್ತಾರೆ. ಗ್ರಾಮ ಸುಭೀಕ್ಷೆಯನ್ನು ಹೊಂದುತ್ತದೆ ಎನ್ನುವ ನಂಬಿಕೆ ಇಲ್ಲಿನ ಜನರಲ್ಲಿ ಇದೆ.

### ಜನ್ನಾವರದಲ್ಲಿನ ವಿಶಿಷ್ಟ ಆಚರಣೆ

ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಜನ್ನಾವರದಲ್ಲಿ ಒಂದು ವಿಶಿಷ್ಟವಾದ ಆಚರಣೆಯು ಇದ್ದು, ಇದು ಪ್ರಸ್ತುತ ಕಾಲಘಟ್ಟದಲ್ಲಿಯೂ ಮುಂದುವರಿದಿದೆ. ಇಲ್ಲಿ ಫೆಬ್ರವರಿ ತಿಂಗಳಲ್ಲಿ ಕೊಟ್ಟೂರು ಚನ್ನಬಸವೇಶ್ವರನ ಜಾತ್ರೆಯು ೭ ದಿನಗಳ ಕಾಲ ನಡೆಯುತ್ತದೆ. ಇದನ್ನು ಸಿದ್ದೇಶ್ವರ ಬೆಟ್ಟದ ಮೇಲೆ ಆಚರಿಸುತ್ತಾರೆ. ಇಲ್ಲಿ ಮೊದಲನೆಯ ದಿನ ಇಲ್ಲಿನ ದೇವರು ಬೆಟ್ಟದ ಮೇಲೆ ಹೋದಾಗ ಅಲ್ಲಿ ದೀಪವನ್ನು ಹಚ್ಚುತ್ತಾರೆ. ಈ ದೀಪಕ್ಕೆ ಎಣ್ಣೆಯ ಬದಲಿಗೆ ನೀರನ್ನು ಹಾಕಿ ಉರಿಸಲಾಗುತ್ತದೆ. ಈ ದಿನದ ಮುಂಜಾನೆ ೭–೩೦ರಿಂದ ಸಂಜೆ ೫ ಗಂಟೆಯವರೆಗೂ ಈ

ದೀಪವೂ ನೀರಿನಿಂದಲೇ ಉರಿಯುತ್ತದೆ. ನಂತರ ತಾನೇತಾನಾಗಿ ನಂದಿ ಹೋಗುತ್ತದೆ. ಈ ಜಾತ್ರೆ ನಡೆಯುವ ಉಳಿದ ದಿನಗಳಲ್ಲಿಯೂ ಇದು ಉರಿಯುವುದಿಲ್ಲ. ಇದೊಂದು ದಿನ ಮಾತ್ರ ಅದರಲ್ಲೂ ಮೇಲೆ ತಿಳಿಸಿದ ವೇಳೆಯವರೆಗೆ ಮಾತ್ರ ದೀಪವು ಎಣ್ಣೆಯ ಬದಲಿಗೆ ನೀರಿನಿಂದ ಉರಿಯುತ್ತದೆ ಎಂದು ಈ ಊರಿನ ಗ್ರಾಮಸ್ತರು ಹೇಳುತ್ತಾರೆ. ಇದೊಂದು ಇಲ್ಲಿನ ವಿಶಿಷ್ಟ ಆಚರಣೆಯಾಗಿ ಕಂಡುಬರುತ್ತದೆ ಮತ್ತು ಆಶ್ಚರ್ಯವನ್ನು ಉಂಟುಮಾಡುತ್ತದೆ.

**ಕೃಷಿಗೆ ಸಂಬಂಧಿಸಿದ ಆಚರಣೆಗಳು ಮತ್ತು ನಂಬಿಕೆಗಳು**

ಕಣಕಟ್ಟೆ ಹೋಬಳಿ ವ್ಯಾಪ್ತಿಯಲ್ಲಿನ ಜನರು ಒಕ್ಕಲುತನ, ಕೃಷಿ, ವ್ಯವಸಾಯ, ರೈತಾಪಿಕಸುಬು ಹೀಗೆ ಹಲವು ಹೆಸರುಗಳಿಂದ ಕರೆಯಲ್ಪಡುವ ಕೃಷಿ ಬದುಕನ್ನು ತಮ್ಮ ಜೀವಂತವನ್ನಾಗಿಸಿ ಕೊಂಡಿದ್ದಾರೆ. ಇದು ಸಕಲ ಜೀವರಾಶಿಗೆ ಅನ್ನ ನೀಡುವ ಪವಿತ್ರ ಕಾಯಕವಾಗಿದೆ. ರಾಗಿ, ಭತ್ತ, ಜೋಳ ಮುಂತಾದವನ್ನು ಬೆಳೆಯುವ ಜನರು ನೀರಾವರಿ ಸೌಲಭ್ಯ ಮತ್ತು ಮಳೆಯ ನೀರನ್ನೇ ಅವಲಂಬಿಸಿರುವ ರೈತರು ಭೂಮಿ ತಾಯಿಯನ್ನು ನಂಬಿ ಬದುಕುವ ಅನುವಂಶೀಯತೆ ಅಧ್ಯಯನ ಪ್ರದೇಶದಲ್ಲಿ ಕಂಡುಬರುತ್ತದೆ. ಇಲ್ಲಿ ಕೃಷಿಗೆ ಸಂಬಂಧಿಸಿದ ಹಲವಾರು ಆಚರಣೆಗಳು ಕಂಡುಬರುತ್ತದೆ.

**ಹೊನ್ನಾರು**

ಸಾಮಾನ್ಯವಾಗಿ ಬೇಸಿಗೆ ಕಾಲ ಕಳೆದು ಮಳೆಗಾಲ ಪ್ರಾರಂಭವಾಗಿ ಮೊದಲ ಹನಿ ನೆಲಕ್ಕೆ ಬಿದ್ದು ಮಳೆಯು ಚೆನ್ನಾಗಿ ಬಂದರೆ ಉಳುಮೆ ಮಾಡಲು ಪ್ರಾರಂಭಿಸುವ ಮುನ್ನ ರೈತರು ಹಲವು ಆಚರಣೆಗಳನ್ನು ಮಾಡುತ್ತಾರೆ. ಮೊದಲು ರೈತನು ಮಡಿಯಿಂದ ಮಡಿಬಟ್ಟೆ ಉಟ್ಟು, ನೇಗಿಲು, ನೊಗ, ಕುಂಟೆ ಮುಂತಾದ ವ್ಯವಸಾಯ ಪರಿಕರಗಳನ್ನು ತೊಳೆದು ಎತ್ತು ಹಾಗೂ ಹಸುಗಳನ್ನು ತೊಳೆದು ಇವೆಲ್ಲವುಗಳನ್ನು ಪೂಜೆ ಮಾಡುತ್ತಾನೆ. ಸಗಣಿ ಉಂಡೆಗೆ ಗರಿಕೆ ಸಿಗಿಸಿ ಗಣೇಶನನ್ನು ಮಾಡುತ್ತಾರೆ. ಆನಂತರ ತಮ್ಮ ತಮ್ಮ ಜಮೀನುಗಳಿಗೆ ಹೋಗಿ ಅಲ್ಲಿ ಮತ್ತೊಮ್ಮೆ ಪೂಜೆ ಮಾಡಿ ಮೊಸರನ್ನವನ್ನು ನೈವೇದ್ಯಕ್ಕೆ ಇಟ್ಟು ನಂತರ ನೇಗಿಲನ್ನು ಹೂಡಿ ವರ್ಷದ ಮೊದಲ ಬೇಸಾಯವನ್ನು ಪ್ರಾರಂಭಿಸುತ್ತಾರೆ. ಇದು ಹಿಂದಿನಿಂದಲೂ ನಡೆದುಕೊಂಡು ಬಂದ ರೀತಿ ಆಚರಣೆಯಾಗಿದೆ.

**ಬಿತ್ತನೆ ಪೂಜೆ**

ಭೂಮಿಯನ್ನು ಬಿತ್ತುವ ಮೊದಲು ಅಥವಾ ಬೀಜವನ್ನು ಬಿತ್ತುವ ಮೊದಲು ಬಿದಿರಿನಿಂದ ತಯಾರಿಸಿದ ಗೂಡೆಗಳಲ್ಲಿ (ಬುಬ್ಬಲಿ) ಬಿತ್ತುವ ಬೀಜಗಳನ್ನು ತುಂಬಿ ವಿಭೂತಿ, ಅರಿಶಿನ,

ಕುಂಕುಮ ಇಟ್ಟು, ಸಗಣಿಯಲ್ಲಿ ಗಣೇಶನನ್ನು ಮಾಡಿ ಹೊಲದ ಮೂಲೆಯಲ್ಲಿಟ್ಟು ಪೂಜೆ ಮಾಡಿ ಒಂದು ನೂರಾಗಲಿ, ನೂರು ಸಾವಿರವಾಗಲಿ, ಸಾವಿರ ಲಕ್ಷವಾಗಲಿ ಹೀಗೆ ಮುಂದುವರೆಯಲಿ ಹೆಚ್ಚಲಿ ಎಂದು ಹೇಳಿ ಬಿತ್ತನೆ ಕಾರ್ಯ ಶುರುಮಾಡುತ್ತಾರೆ.

**ಕೊಯ್ಯಲು ಪೂಜೆ**

ಭೂಮಿಯನ್ನು ಉತ್ತು, ಬಿತ್ತಿ, ಸಮೃದ್ಧಿಯಾಗಿ ಬೆಳೆದ ಬೆಳೆಯನ್ನು ಕಟಾವಿನ ಹಂತಕ್ಕೆ ಬಂದಾಗ ಕೊಯ್ಲು ಮಾಡುವ ಮೊದಲು ಒಳ್ಳೆಯ ದಿನವನ್ನು ನೋಡಿ ಕಟಾವು ಮಾಡುವ ಕುಡುಗೋಲನ್ನು ಹೊಲದ ಬದುವಿನಲ್ಲಿಟ್ಟು ಪೂಜೆ ಮಾಡಿ ಬೆಳೆಯನ್ನು ಕಟಾವು ಮಾಡುತ್ತಾರೆ. ನಂತರ ರಾಶಿ ಹಾಕಿ ಬಣವೆ ಮಾಡುತ್ತಾರೆ.

**ಕಣ ಮಾಡುವುದು**

ರೈತ ಸಮೃದ್ಧಿಯಾಗಿ ಬೆಳೆದಿರುವ ಆಹಾರ ಧಾನ್ಯಗಳನ್ನು ಹುಲ್ಲಿನಿಂದ ಬೇರ್ಪಡಿಸಿ ಕಾಳುಗಳನ್ನು ಪ್ರತ್ಯೇಕಗೊಳಿಸುವುದು ಅತ್ಯಾವಶ್ಯಕ, ಕೊಯ್ಲು ಮಾಡಿರುವ ಗಟ್ಟಿಯಾಗಿರುವ ಒಂದು ನಿರ್ದಿಷ್ಟ ಸ್ಥಳದಲ್ಲಿ ಕಳೆಯನ್ನು ಕೆತ್ತಿ ವೃತ್ತಾಕಾರವಾಗಿ ಕಣವನ್ನು ಮಾಡುತ್ತಾರೆ. ನಂತರ ಈ ಕಣವನ್ನು ಗಟ್ಟಿಗೊಳಿಸಿ ಬಗ್ಗಡಹಾಕಿ ಸಾರಿಸಿ ೩-೪ದಿನಗಳ ನಂತರ ಒಣಗಿದ ಮೇಲೆ ಹುಲ್ಲಿನ ರಾಶಿಯನ್ನು ಅದರ ಮೇಲೆ ಹಾಸಿ ರೋಣಗಲ್ಲನ್ನು ಹೊಡೆಯುವ ಮುನ್ನ ಅದನ್ನು ಪೂಜೆ ಮಾಡುತ್ತಾರೆ.

**ರಾಶಿ ಪೂಜೆ**

ಹುಲ್ಲಿನಿಂದ ಬೇರ್ಪಟ್ಟ ಧಾನ್ಯಗಳಲ್ಲಿ ಜೊಳ್ಳನ್ನು ತೆಗೆದು ಗಟ್ಟಿಯಾದ ಧಾನ್ಯಗಳನ್ನು ಒಂದು ಕಡೆ ರಾಶಿ ಹಾಕುತ್ತಾರೆ. ರಾಶಿಯ ಸುತ್ತಲೂ ಧಾನ್ಯ ಮಾಡಲು ಬಳಸಿದ್ದ ಕೋಲು, ಮರಗೋಲು, ಇಬ್ಬಳ, ಮರ ಮುಂತಾದವುಗಳನ್ನು ರಾಶಿಗೆ ಇಟ್ಟು ಮಾವಿನ ಎಲೆ, ಹೂಗಳನ್ನು ರಾಶಿಗೆ ಮತ್ತು ರೋಣಕಲ್ಲುಗೆ ಮುಡಿಸಿ ಪೂಜೆ ಮಾಡುತ್ತಾರೆ. ಪೂಜೆ ಸಂದರ್ಭದಲ್ಲಿ ಕಾಳುಗಳ ಪಲ್ಲಾರ ಅಥವಾ ಮಂಡಕ್ಕಿ ಮತ್ತು ಬೆಲ್ಲವನ್ನು ಒಟ್ಟಿಗೆ ಸೇರಿಸಿ ರಾಶಿಯ ಮುಂದೆ ಇಟ್ಟು ನೈವೇದ್ಯ ಮಾಡುತ್ತಾರೆ. ನಂತರ ಅದನ್ನು ಎಲ್ಲರಿಗೂ ನೀಡಿ ಧಾನ್ಯವನ್ನು ಚೀಲಗಳಿಗೆ ತುಂಬುತ್ತಾರೆ. ಈ ರೀತಿ ಕಣಕಟ್ಟೆ ಹೋಬಳಿ ಪರಿಸರದಲ್ಲಿ ಕೃಷಿಗೆ ಸಂಬಂಧಿಸಿದ ಆಚರಣೆಗಳನ್ನು ಮಾಡುತ್ತಾರೆ ಮತ್ತು ಈ ಆಚರಣೆಗಳನ್ನು ಮಾಡುವುದರ ಮೂಲಕ ಕೃಷಿ ಚಟುವಟಿಕೆಗಳು ಸುಮಗವಾಗಿ ನಡೆಯುತ್ತವೆ ಎಂದು ನಂಬಿದ್ದಾರೆ.

**ಐತಿಹ್ಯಗಳು**

ಪ್ರಾಚೀನ ನಿರಕ್ಷರ ಕುಕ್ಷಿಯ ಗಮನಕ್ಕೆ ಬಾರದ ವಸ್ತುವೇ ಇಲ್ಲ. ಅದನ್ನು ನೋಡಿದಾಗ ಮೂಡಿದ ಭಾವನೆಗಳು ಅವನ ಶುದ್ಧ ಸ್ವಚ್ಛಂದ ಕಲ್ಪನಾ ಪ್ರತಿಭೆಯ ಮೂಲಕ ಹೊರಬರುವ ಐತಿಹ್ಯ ಶುದ್ಧ ಪುರಾಣಗಳ ರೂಪ ಪಡೆಯುತ್ತದೆ. ಸೃಷ್ಟಿಯ ಬಗ್ಗೆ ಅದರ ಹಿಂದಿರುವ ಶಕ್ತಿಯ ಬಗ್ಗೆ, ಸ್ವರ್ಗ ಮತ್ತು ಪಾತಾಳಗಳ ಬಗ್ಗೆ ಅವನು ಚಿಂತಿಸಿದ ತನ್ನ ಕಲ್ಪನೆಗೆ ಹೊಳೆದಂತೆ ವಿವರಿಸಿದ. ಹಿಂದೆ ನಡೆದ ಘಟನಗಳನ್ನು ಸಹ ಬಣ್ಣ ಕಟ್ಟಿ ಅಕ್ಕಪಕ್ಕದವರಿಗೆ ನಿರೂಪಿಸಿದ. ಅತ್ಯುಕ್ತಿ ಉತ್ಪ್ರೇಕ್ಷೆಗಳಿಂದ ಕೂಡಿದ ಕಾವ್ಯ ಶೈಲಿ ಅಂದಿನ ವ್ಯಾಖ್ಯಾನದ ಪ್ರಮುಖ ಲಕ್ಷಣವಾಯಿತು. ಅದೆಲ್ಲ ಉದ್ದೇಶಪೂರ್ವಕವಾಗಿ ಸಿದ್ದವಾದುದ್ದಲ್ಲ; ಅನೈಚ್ಛಿಕವಾಗಿ ಲಹರಿ ಲಹರಿಯಾಗಿ ಹೊರಹೊಮ್ಮಿದ್ದು, ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಳ್ಳುವ ಕಟ್ಟುಕತೆಗಳೇ ಐತಿಹ್ಯಗಳಾಗುತ್ತವೆ. ವ್ಯಕ್ತಿಗಳಿಗೆ, ಸ್ಥಳಗಳಿಗೆ, ಘಟನೆಗಳಿಗೆ ಸಂಬಂಧಿಸಿದಂತೆ ಯಾವುದೇ ನಿರ್ದಿಷ್ಟ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಗಳೇ ಐತಿಹ್ಯಗಳು.[೬]

ಐತಿಹ್ಯಗಳು ಸಮಾಜದ ಹಲವು ನಂಬಿಕೆಗಳನ್ನು ಪ್ರತಿಬಿಂಬಿಸುತ್ತವೆ. ಐತಿಹ್ಯ/ದಂತಕಥೆಯು ಯಾವುದೇ ಸಂದರ್ಭವೊಂದನ್ನು ಸಮರ್ಥಿಸಿಕೊಳ್ಳಲು ಅಜ್ಞಾನವನ್ನು ಮುಚ್ಚಲು ಭ್ರಾಂತಿಯನ್ನು ತೊಡೆದುಹಾಕಲು ಅಥವಾ ಪರಂಪರೆಯನ್ನು ಉಳಿಸಿಕೊಂಡು ಬರಲು ಸೃಷ್ಟಿಯಾಗಿದ್ದಿರಬಹುದು. ಇಲ್ಲಿ ಸ್ಥಳೀಯ ಇತಿಹಾಸ ಚರಿತ್ರೆಕಾರನಿಗೆ ಮುಖ್ಯವೆನಿಸಿದ ದಾಖಲೆಗಳನ್ನು ಒದಗಿಸಿಕೊಟ್ಟು, ಆ ನಾಡಿನ ಇತಿಹಾಸ ರಚನೆಗೆ ಒಂದು ಚೌಕವನ್ನು ಸೃಷ್ಟಿಸಿಕೊಟ್ಟಂತಾಯಿತು. ಸಾಂಸ್ಕೃತಿಕ ಚರಿತ್ರೆಯ ರಚನೆಯಲ್ಲಿ ಇತ್ತೀಚೆಗೆ ಮೌಖಿಕ ಪರಂಪರೆಯನ್ನು ಆಧಾರವಾಗಿ ಬಳಸಿಕೊಳ್ಳಲಾಗುತ್ತದೆ. ಮೌಖಿಕ ಆಧಾರಗಳು ಜೀವಂತವಾಗಿ ಜನಸಮುದಾಯದ ಬದುಕಿನ ಭಾವನೆಗಳಲ್ಲಿ ಬೆರೆತು ಹೋಗಿರುತ್ತದೆ. ಈ ಹಿನ್ನೆಲೆಯಲ್ಲಿ ಐತಿಹ್ಯಗಳು ಪ್ರಮುಖ ಪಾತ್ರವಹಿಸುತ್ತವೆ.

**ದೊಡ್ಡಮೇಟಿಕುರ್ಕೆ ಸ್ಥಳನಾಮದ ಕುರಿತು ಇರುವ ಐತಿಹ್ಯ**

ಸಾಮಾನ್ಯವಾಗಿ ಐತಿಹ್ಯಗಳು ಒಂದು ಊರು, ಕಥೆ, ಜಾಗದ, ಸ್ಥಳದ ಕುರಿತದ್ದಾಗಿರುತ್ತದೆ. ಪ್ರಸ್ತುತ ದೊಡ್ಡಮೇಟಿ ಕುರ್ಕೆ ಗ್ರಾಮದ ಸ್ಥಳನಾಮದ ಕುರಿತು ಐತಿಹ್ಯವಿರುವುದನ್ನು ಕಾಣುತ್ತೇವೆ. ಹಿಂದೆ ಸ್ವಾಮೀಜಿಗಳೊಬ್ಬರು ಕುದುರೆಗಾಡಿಯ ಮೇಲೆ ದೇಶ ಪರ್ಯಾಟನೆಗೆ ಹೊರಟಿದ್ದರಂತೆ ಅವರು ಕ್ರಮಿಸುವ ದಾರಿಯಲ್ಲಿ ಈ ಮೇಟಿಕುರ್ಕೆ ಗ್ರಾಮವು ಇತ್ತು. ಅಂದು ಅವರು ಈ ಮಾರ್ಗವಾಗಿ ಹೋಗುತ್ತಿದ್ದರು. ಅಂದು ಸೋಮವಾರವಾಗಿತ್ತು. ಆ ಕಾರಣಕ್ಕಾಗಿ ಇಲ್ಲಿನ ರೈತಾಪಿ ಜನರು ಬೇಸಾಯವನ್ನು ಮಾಡುತ್ತಿರಲಿಲ್ಲ. ಈಗಲೂ ಸಹ ಈ ಪ್ರದೇಶದಲ್ಲಿ ಸೋಮವಾರ

ದಂದು ಬೇಸಾಯವನ್ನು ಮಾಡುವುದಿಲ್ಲ. ಇದನ್ನು ಗಮನಿಸಿದ ಸ್ವಾಮೀಜಿಗಳು ಸೋಮವಾರ ಬೇಸಾಯ ಮಾಡಬಾರದು. ಇದನ್ನು ಇವರು ಚೆನ್ನಾಗಿ ಪಾಲಿಸುತ್ತಿದ್ದಾರೆ. ಅಂದರೆ ಇಲ್ಲಿ ಉತ್ತಮ ಜನರಿದ್ದಾರೆ. ಹಾಗಾಗಿ ಈ ಗ್ರಾಮವು ಎಲ್ಲಾ ರೀತಿಯಲ್ಲೂ ಅಭಿವೃದ್ಧಿಯಾಗಲೀ ಮತ್ತು ದೊಡ್ಡದಾಗಿ ಬೆಳೆಯುತ್ತಾ ಹೋಗಲೀ ಎಂದು ಆಶೀರ್ವದಿಸಿ ಇಲ್ಲಿನ ಮೇಟಿಯು ಶ್ರೀಮಂತನಾಗಲೀ ಎಂದು ಹರಸಿದರು. ಹಾಗಾಗಿ ಈ ಊರಿಗೆ ದೊಡ್ಡ ಮೇಟಿಕುರ್ಕೆ ಎಂಬ ಹೆಸರು ಬಂದಿತು ಎಂದು ಹೇಳುತ್ತಾರೆ. ಇದು ಗ್ರಾಮದ ಸ್ಥಳನಾಮದ ಕುರಿತು ಇರುವ ಐತಿಹ್ಯವಾಗಿದೆ.

ನಂತರದಲ್ಲಿ ಇದೇ ಸ್ವಾಮೀಜಿ ಮುಂದೆ ಸಾಗಿದಂತೆ ಅವರಿಗೆ ಮತ್ತೊಂದು ಮೇಟಿಕುರ್ಕೆ ಗ್ರಾಮವು ಸಿಕ್ಕಿತು. ಅಂದು ಕೂಡ ಅದೇ ಸೋಮವಾರವಾಗಿದ್ದು, ಅಲ್ಲಿ ಬೇಸಾಯವನ್ನು ಹೂಡಿದ್ದರು. ಇದನ್ನು ಗಮನಿಸಿದ ಗುರುಗಳು ಖೇದಗೊಂಡು ಈ ಊರಿನ ಜನರು ಆಚಾರವಂತರಲ್ಲ. ಇವರಿಗೆ ಯಾವುದೇ ರೀತಿ ನೀತಿಗಳು ತಿಳಿದಂತಿಲ್ಲ. ಹಾಗಾಗಿ ಇವರು ಮುಂದುವರೆಯದೇ ಇರಲಿ ಮತ್ತು ಈ ಮೇಟಿಕುರ್ಕೆಯು ಚಿಕ್ಕದಾಗುತ್ತಾ ಹೋಗಲಿ ಎಂದು ಶಪಿಸಿದರು. ಹಾಗಾಗಿ ಈ ಊರಿಗೆ ಚಿಕ್ಕಮೇಟಿಕುರ್ಕೆ ಎಂದು ಹೆಸರಾಯಿತು ಎಂದು ಹೇಳುವ ಐತಿಹ್ಯವಿದೆ. ಈ ಎರಡು ಗ್ರಾಮಗಳೂ ಕಣಕಟ್ಟೆ ಹೋಬಳಿ ಪರಿಸರದಲ್ಲಿ ಕಂಡುಬರುತ್ತದೆ. ಐತಿಹ್ಯವು ಸತ್ಯಕ್ಕೆ ಎಷ್ಟು ಹತ್ತಿರವಾದುದಾಗಿದೆಯೇ ಎಂದು ಗಮನಿಸುವಾಗ ದೊಡ್ಡ ಮೇಟಿಕುರ್ಕೆ ಗ್ರಾಮವು ಅಭಿವೃದ್ಧಿ ಹೊಂದುತ್ತಿರುವುದನ್ನು ಚಿಕ್ಕಮೇಟಿಕುರ್ಕೆ ಗ್ರಾಮದ ಜನತೆ ಬೇರೆ ಬೇರೆ ಊರುಗಳಿಗೆ ಬಂದು ನೆಲೆಸುವುದನ್ನು ಗಮನಿಸಬಹುದಾಗಿದೆಯಾದರೂ ಇದಕ್ಕೆ ಅದರದೇ ಆದ ಬೇರೆ ಬೇರೆ ಕಾರಣಗಳೂ ಇರಬಹುದು. ಒಟ್ಟಾರೆಯಾಗಿ ಇದೊಂದು ಜನರು ಹೇಳುವ ಐತಿಹ್ಯವು, ಅವರ ಕಣ್ಣಿಗೇ ಕಾಣುವಂತೆ ಗೋಚರಿಸುವುದನ್ನು ತಿಳಿಯಬಹುದಾಗಿದೆ.

ಮೇಣಿನಹಳ್ಳಿಯಲ್ಲಿನ ಸಿದ್ದೇಶ್ವರ ಬೆಟ್ಟದಲ್ಲಿ ಸಿದ್ದಪ್ಪನು ನೆಲೆಸಿದ್ದಾನೆ. ಇದನ್ನು ಹಿರೇಕಲ್ಲು ಬೆಟ್ಟ ಎಂದೂ ಸಹ ಕರೆಯುತ್ತಾರೆ. ಇಲ್ಲಿ ನಾಟ್ಯಧಾರಿ ಎನ್ನುವ ಸ್ಥಳದ ಹೆಸರಿದ್ದು, ಇಲ್ಲಿನ ಜನರು ಹೇಳುವ ಪ್ರಕಾರ ಇದು ಅರ್ಜುನ ಮತ್ತು ಶಿವನಿಗೂ ಯುದ್ಧ ನಡೆದ ಸ್ಥಳ. ಇದನ್ನು ಇಂದ್ರಶೀಲ ಪರ್ವತವೆಂತಲು ಕರೆಯುತ್ತಾರೆ. ಮತ್ತು ಅಲ್ಲಿಯೇ ಅರ್ಜುನನು ಪಾರ್ವತಿಗೆ ಬೆನ್ನು ತೋರಿಸಿದ್ದು, ಯುದ್ಧ ಮುಗಿದು ಶಿವನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ನೀಡಿದ ಸ್ಥಳ. ಇಲ್ಲಿ ಶಿವನ ಪಾದದ ಗುರುತು ಇದೆ. ಯುದ್ಧ ನಡೆದಿದ್ದರಿಂದ ಈ ಸ್ಥಳವನ್ನು ನಾಟ್ಯದಾರಿ ಎಂದು ಕರೆಯುತ್ತಾರೆ. ಈ ಸ್ಥಳವನ್ನು ಕುರಿತು ಐತಿಹ್ಯವನ್ನು ಹೇಳುತ್ತಾರೆ.

### ೫.೨. ಹಬ್ಬಗಳು

ನಂಬಿಕೆ ಮತ್ತು ಸಂಪ್ರದಾಯಗಳ ಕ್ರಿಯಾರೂಪಗಳೇ ಹಬ್ಬಗಳು. ಅವುಗಳು ಬೇರು ಮಟ್ಟದಲ್ಲಿ ಅಪಿತಿವೆ. ನಿಸರ್ಗಾರಾಧನೆಯಲ್ಲಿ ಪಸರಿಸಿವೆ. ಅವು ಕೃಷಿ ಸಂಸ್ಕೃತಿಯಲ್ಲಿ ಸ್ಪಷ್ಟ

ರೂಪವನ್ನು ಪಡೆದು ಕಾಲಾನಂತರದಲ್ಲಿ ವಿಕಾಸಗೊಳ್ಳುತ್ತ ಜಟಿಲವಾದದ್ದುಂಟು. ಪ್ರತಿಯೊಂದು ಯುಗದ ಜನರೂ ಆಯಾ ಕಾಲದ ಅಭಿರುಚಿ ಮನೋಧರ್ಮಗಳಿಗನುಗುಣವಾಗಿ ತಂತಮ್ಮ ಕಲ್ಪನೆಗಳಿಗನು ಸಾರವಾಗಿ ಅವುಗಳ ರೂಪ ಸ್ವರೂಪಗಳಲ್ಲಿ ಮಾರ್ಪಾಡುಗಳನ್ನು ಮಾಡಿಕೊಂಡಿದ್ದುಂಟು. ಹೊಸ ಹೊಸ ವಿಧಿನಿಷೇಧಗಳನ್ನು, ಉಪಾಸನಾ ವಿಧಾನಗಳನ್ನು ಸೇರಿಸಿದ್ದುಂಟು. ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನೊಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿ ಹಬ್ಬಗಳು ಹುಟ್ಟು ಪಡೆದವು. ಹೀಗಾಗಿ ಹಲವು ಸಂಪ್ರದಾಯಗಳ ಮೊತ್ತ ಹಬ್ಬವಾಗುತ್ತದೆ.[೮]

ನಾವು ವಾಸಿಸುವ ಈ ಪ್ರಪಂಚ ಧರ್ಮಕ್ಷೇತ್ರವೂ ಹೌದು, ಕರ್ಮಕ್ಷೇತ್ರವೂ ಹೌದು. ಇಲ್ಲಿ ವಾಸಿಸುವ ನಾವು ನಮ್ಮ ಒಳಿತಿಗಾಗಿ ಸುಖ-ಸಂತೋಷಕ್ಕಾಗಿ, ಬಾಳಿನಲ್ಲಿ ಬದಲಾವಣೆಗಾಗಿ, ಸಾಧನೆಯಿಂದ ಸಿದ್ಧಿಯತ್ತ ಸಾಗುವುದಕ್ಕಾಗಿ, ಸಮಾಜ ಸಂಘಟನೆಗಾಗಿ, ಆತ್ಮೀಯರೊಂದಿಗೆ ಬೆರೆಯುವುದಕ್ಕಾಗಿ ಹಲವು ಹಬ್ಬ-ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದೇವೆ. ವ್ರತ ನಿಯಮಗಳನ್ನು ಎಲ್ಲಾ ದಿನಗಳಂದು ಆಚರಿಸಲು ಸಾಧ್ಯವಿಲ್ಲ. ಕೊನೆಪಕ್ಷ ಇಂಥ ದಿನಗಳಲ್ಲಾದರೂ ಸ್ವಲ್ಪ ದೇಹದಂಡನೆ, ಆತ್ಮಚಿಂತನೆ ಮಾಡಿದಾಗ ಅಲ್ಲೂ ಇಲ್ಲೂ ಸಲ್ಲುವವರಾಗಿ ಮಾನವ ಮಾಧವನಾದನು.[೯] ಪ್ರಸ್ತುತ ತನ್ನ ಅಧ್ಯಯನ ಕ್ಷೇತ್ರದಲ್ಲಿ ಹಲವಾರು ಹಬ್ಬಗಳನ್ನು ಆಚರಿಸುತ್ತಾ ಜನರು ಅದನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಅಂತಹ ಹಬ್ಬಗಳ ಪರಿಚಯವು ಈ ಕೆಳಗಿನಂತಿದೆ.

### ಮಕರ ಸಂಕ್ರಾಂತಿ

ಎಳ್ಳು ಬೆಲ್ಲವನ್ನಂಚಿ ಒಳ್ಳೆಯ ಮಾತುಗಳನ್ನಾಡು ಎಂಬ ಪ್ರತೀತಿಯಂತೆ ನಾಡಿಗೆಲ್ಲ ಸಮೃದ್ಧಿಯನ್ನು ತರಲೆಂದು ಮಕರ ಸಂಕ್ರಾಂತಿ ಹಬ್ಬವನ್ನು ಆಚರಿಸಲಾಗುತ್ತದೆ. ಸಂಕ್ರಾಂತಿ ಎಂದರೆ ವಿಶಿಷ್ಟವಾದ ಬದಲಾವಣೆ ಹಾಗೂ ಉಜ್ವಲವಾದ ಬೆಳಕು ಎಂದರ್ಥ. ಬೆಳಕು ಎಂದರೆ ಬದಲಾವಣೆ ಎಂಬ ಅರ್ಥವನ್ನು ತರುತ್ತದೆ. ಭೂಮಿಯ ಮೇಲೆ ನಡೆಯುವ ಎಲ್ಲಾ ರೀತಿಯ ಚಟುವಟಿಕೆಗಳಿಗೆ ಸೂರ್ಯ ಆಧಾರಸ್ತಂಭವಾಗಿರುವಂತೆ ಸೂರ್ಯ ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶಿಸುವ ಕಾಲಕ್ಕೆ ಸಂಕ್ರಾಂತಿ ಎಂದು ಹೆಸರು. ಮೂಲತಃ ಲಕ್ಷ್ಮೀಯ ಆಗಮನದ ತರುವಾಯ ಸೂರ್ಯನ ದ್ವಾದಶ ರಾಶಿಗಳಲ್ಲೊಂದಾದ ಮಕರರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ೬ ತಿಂಗಳ ಕಾಲ ಪ್ರಯಾಣ ಬೆಳಸುವನು. ಈ ಪಥ ಬದಲಿಕೆಯ ದಿನವನ್ನು ಮಕರ ಸಂಕ್ರಮಣ ಅಥವಾ ಮಕರ ಸಂಕ್ರಾಂತಿ ಎಂದು ಕರೆಯುತ್ತಾರೆ. ಈ ಕಾಲವನ್ನು ಭಾರತೀಯರು ಉತ್ತರಾಯಣ ಪುಣ್ಯಕಾಲವೆಂದು ಕರೆಯುತ್ತಾರೆ.[೧೦]

ಪ್ರಸ್ತುತ ಅಧ್ಯಯನ ವ್ಯಾಪ್ತಿಗೆ ಒಳಪಡುವ ಪ್ರತಿಗ್ರಾಮಗಳಲ್ಲಿ ಆರಂಭಿಕ ಹಬ್ಬವಾಗಿ ಸಂಕ್ರಾಂತಿಯನ್ನು ತುಂಬಾ ಸಂಭ್ರಮ, ಸಡಗರದಿಂದ ಆಚರಿಸುತ್ತಾರೆ. ಇದೇ ಸಂದರ್ಭದಲ್ಲಿ

ಕಷ್ಟಪಟ್ಟು ಉತ್ತಿ, ಬಿತ್ತಿ ಬೆಳೆಯನ್ನು ತೆಗೆದ ರಾಗಿ, ಭತ್ತದಂತಹ ಧಾನ್ಯಗಳ ರಾಶಿಯಿಂದ ರೈತನ ಮುಖದಲ್ಲಿ ಮಂದಹಾಸದ ನಗೆ ಬೀರುವ ಸುಖ ಸಂತೋಷಗಳ ಸುಗ್ಗಿಯ ಕಾಲವು ಇದಾಗಿದೆ. ಸಾಮಾನ್ಯವಾಗಿ ಈ ಹಬ್ಬದಲ್ಲಿ ವಿವಾಹಿತ ಮತ್ತು ಅವಿವಾಹಿತ ಹೆಣ್ಣು ಮಕ್ಕಳು ಎಳ್ಳು, ಬೆಲ್ಲ, ಕೊಬ್ಬರಿ, ಕಡಲೆ, ಶೇಂಗಾಬೀಜ, ಕಬ್ಬು, ಸಕ್ಕರೆಯಿಂದ ತಯಾರಿಸಿದ ವಿವಿಧ ಆಕಾರದ ಸಿಹಿ ತಿನಿಸುಗಳು, ಬಾಳೆಹಣ್ಣು, ಕಬ್ಬು ಇವುಗಳನ್ನು ಸುತ್ತಮುತ್ತಲಿನ ಮನೆಯವರಿಗೆ ಹಂಚುವುದನ್ನು ಹಿಂದಿನಿಂದಲೂ ಆಚರಿಸಿಕೊಂಡು ಬಂದಿದ್ದಾರೆ. ತಮ್ಮ ಆನಂದ ಸಂತೋಷಕ್ಕಾಗಿ ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತನಾಡೋಣವೆಂದು ಎಳ್ಳು ಬೆಲ್ಲ ಹಂಚುತ್ತಾರೆ.

### ಮಹಾಶಿವರಾತ್ರಿ

ಮಾಘ ಬಹುಳ ಚತುರ್ದಶಿ ಶಿವರಾತ್ರಿ. ಅಂದು ಪ್ರಪಂಚಕ್ಕೆ ತಂದೆಯೆನಿಸಿದ ಶಿವನ ಆರಾಧನೆಗೆ ಪ್ರಶಸ್ತ ಮುಹೂರ್ತ. ಮಹಾಶಿವರಾತ್ರಿಯಂದು ನಡುರಾತ್ರಿ ಕೋಟಿ ಸೂರ್ಯ ಪ್ರಕಾಶನಾದ ಪರಶಿವನು ಶಿವಲಿಂಗದಿಂದ ಸ್ವಯಂಭೂವಾಗಿ ಉದ್ಭವಿಸಿದನೆಂದು ತಿಳಿದುಬರುತ್ತದೆ. ಇದಲ್ಲದೆ ಶಿವನು ಹಾಲಾಹಲ ವಿಷ ಕುಡಿದ ದಿನವೆಂತಲೂ, ತಾಂಡವನೃತ್ಯ ಮಾಡಿದ ದಿನವೆಂತಲೂ ಹೇಳುತ್ತಾರೆ.[೧೧] ಈ ದಿನ ಅರುಣೋದಯಕ್ಕೆ ಎದ್ದು ಮುಂಜಾನೆಯಿಂದ ಹಿಡಿದು ರಾತ್ರಿಪೂರ್ತ ಭಕ್ತರು ನಿದ್ರೆ ಮಾಡದೇ ಜಾಗರಣೆ ಮಾಡುತ್ತಾರೆ. ಕೆಲವರು ನೀರನ್ನು ಬಿಟ್ಟು ಬೇಯಿಸಿದ ಆಹಾರವನ್ನು ತಿನ್ನುವುದಿಲ್ಲ. ಅಂದು ಶಿವನ ದೇವಾಲಯಗಳಲ್ಲಿ ಅಭಿಷೇಕದೊಂದಿಗೆ ವಿಶೇಷ ಪೂಜೆ ಕೈಗೊಳ್ಳುತ್ತಾರೆ. ಮತ್ತು 'ಓಂ ನಮಃ ಶಿವಾಯ' ಎಂಬ ಮಂತ್ರದೊಂದಿಗೆ ಶಿವನನ್ನು ನೆನೆಯುತ್ತಾರೆ. ಇಂತಹ ಆಚರಣೆಗಳಿಂದ ಆಯಸ್ಸು, ಆರೋಗ್ಯ ಐಶ್ವರ್ಯ, ಸುಖ, ಸಂಪತ್ತುಗಳು ಲಭಿಸುತ್ತದೆ. ಶಿವರಾತ್ರಿಯಂದು ಶಿವದರ್ಶನ ಮಾಡಿದರೆ, ಪುಣ್ಯ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆ ಇದೆ. ಅಧ್ಯಯನ ಕೈಗೊಂಡಿರುವ ಪ್ರದೇಶದಲ್ಲಿ ಎಲ್ಲರೂ ಈ ಹಬ್ಬವನ್ನು ಆಚರಿಸುತ್ತಾರೆ. ಮತ್ತು ಸಾಮಾನ್ಯವಾಗಿ ಬಿಲ್ವಪತ್ರೆ ಮರವನ್ನು ಹುಡುಕಿ ದೀಕ್ಷೆಯಾಗಿರುವ ಮರಕ್ಕೆ ಪೂಜೆಯನ್ನು ಮಾಡುತ್ತಾರೆ.

### ಯುಗಾದಿ

ಯುಗಯುಗಾದಿ ಕಳೆದರೂ, ಯುಗಾದಿ ಮರಳಿ ಬರುತಿದೆ. ಹೊಸ ವರುಷಕ್ಕೆ, ಹೊಸ ಹರುಷವ ಹೊಸತು ಹೊಸತು ತರುತಿದೆ ಎಂಬ ಕವಿ ಬೇಂದ್ರೆಯವರ ವಾಣಿಯಂತೆ ಹೊಸ ವರ್ಷ ಹರ್ಷದಾಯಕವಾಗಲೆಂದು ಒಳ್ಳೆಯ ಇಚ್ಛೆಯಿಂದ ಆಚರಿಸುವ ಹಬ್ಬವೇ ಯುಗಾದಿ. 'ಯುಗ' ಎಂದರೆ ನೂತನವರ್ಷ 'ಆದಿ' ಎಂದರೆ ಆರಂಭ ಎಂದರ್ಥ. ಅಂದರೆ ಹೊಸವರ್ಷದ ಆರಂಭದ ದಿನ ಎಂದರ್ಥ.[೧೨] ನನ್ನ ಅಧ್ಯಯನ ಕ್ಷೇತ್ರದಲ್ಲಿ ಈ ಹಬ್ಬವನ್ನು ೩ ದಿನ

ಆಚರಿಸುತ್ತಾರೆ. ಮೊದಲನೆ ದಿನ ಅಥವಾ ಅಮವಾಸ್ಯೆಯ ದಿನ ಮನೆ ಮಂದಿಯೆಲ್ಲಾ ಮಡಿಯಿಂದ ಇದ್ದು ಅಂದು ನವಗ್ರಹಗಳನ್ನು ಪೂಜೆ ಮಾಡಿ ಅದನ್ನು ಅಲ್ಲಿನ ಲಿಂಗಾಯಿತ ಸ್ವಾಮಿಜಿಯನ್ನು ಕರಿಸಿ ದಾನ ಮಾಡುತ್ತಾರೆ. ಅವರ ಆಡು ಭಾಷೆಯಲ್ಲಿ ಧಾನ್ಯ ಕೊಡುತ್ತಾರೆ. ನಂತರದ ದಿನದಲ್ಲಿ ಮೈಗೆ ಹರಳೆಣ್ಣೆ, ಅರಿಶಿನ ಹಚ್ಚಿಕೊಂಡು ಅಭ್ಯಂಜನ ಮಾಡಿ ಮನೆಯನ್ನೆಲ್ಲಾ ಶುದ್ಧಿ ಮಾಡಿ ಶುಭ್ರವಾಗಿ ಎಲ್ಲರೂ ಕೂಡಿ ದೇವರ ಪೂಜೆಯನ್ನು ದೇವಾಲಯಗಳಲ್ಲಿ ದೇವರಿಗೆ ಪುಣ್ಯವನ್ನು ಅಂದರೆ ಅಭಿಷೇಕವನ್ನು ಮಾಡುತ್ತಾರೆ. ಪೂಜೆ ಆಗುವವರೆಗೂ ಏನೂ ಸೇವಿಸುವುದಿಲ್ಲ. ಪೂಜೆ ಆದ ಮೇಲೆ ಎಲ್ಲರೂ ಎಳ್ಳುಬೆಲ್ಲ ತಿಂದು ಜೀವನದಲ್ಲಿ ಸುಖ-ದುಃಖಗಳೆರಡನ್ನು ಅನುಭವಿಸಬೇಕು ಎಂದು ತಿಳಿಯುತ್ತಾರೆ. ಹಾಗೆಯೇ ಮನೆಯಲ್ಲಿ ಹಿರಿಯರಿಂದ ಕಿರಿಯರಿಗೆ ಪಂಚಾಂಗ ಶ್ರವಣ  ಕಾರ್ಯವೂ ನಡೆಯುತ್ತದೆ. ನಂತರದಲ್ಲಿ ಸಾಮಾನ್ಯವಾಗಿ ಎಲ್ಲರೂ ಸಿಹಿ ಅಡುಗೆಯನ್ನು ಮಾಡಿರುತ್ತಾರೆ. ಇದನ್ನು ಊಟ ಮಾಡಿ ವಿಜೃಂಭಣೆಯಿಂದ ಹಬ್ಬ ಆಚರಿಸುತ್ತಾರೆ. ಕೆಲವೊಮ್ಮೆ ಧಾನ್ಯ ನೀಡುವುದು ಮತ್ತು ಬೇವು ಬೆಲ್ಲ ಸವಿಯುವುದು ಎರಡೂ ಕಾರ್ಯವನ್ನೂ ಒಟ್ಟಿಗೆ ಕೂಡ ಮಾಡುತ್ತಾರೆ. ಮೂರನೇ ದಿನ ವರ್ಷದ ಒಡಕು ಎಂದು ಆಚರಿಸುತ್ತಾರೆ.

**ಗೌರಿ ಗಣೇಶ ಚತುರ್ಥಿ**

ಭಾದ್ರಪದ ಮಾಸದಲ್ಲಿ ಬರುವ ತದಿಗೆಯ ದಿನ ಆಚರಿಸುವ ಸ್ವರ್ಣಗೌರಿವ್ರತ ಒಂದು ಹೆಣ್ಣು ಮಕ್ಕಳ ಮುಖ್ಯವಾದ ಹಬ್ಬವಾಗಿದೆ. ಹಾಗೆಯೇ ಭಾದ್ರಪದ ಶುದ್ಧ ಚತುರ್ಥಿಯ ದಿನವೇ ಗಣೇಶ ಚತುರ್ಥಿ ಹಬ್ಬ.[೧೩] ಗಣೇಶನ ಪೂಜೆಗೆ ಬೇಧವಿಲ್ಲ. ಎಲ್ಲಾ ಕೋಮಿನವರು ಗಣಪತಿಯನ್ನು ಪೂಜಿಸುತ್ತಾರೆ. ಗೌರಿಗಣೇಶನ ವಿಗ್ರಹಗಳನ್ನು ಪೂಜಿಸುತ್ತಾರೆ. ಸಾಮಾನ್ಯವಾಗಿ ಈ ಹಬ್ಬವು ಎರಡು ದಿನಗಳ ಕಾಲ, ೩ ದಿನ ಅಥವಾ ೫ ರಿಂದ ೯ ದಿನಗಳವರೆಗೂ ಮಾಡುತ್ತಾರೆ. ಆದರೆ ಮೊದಲ ೨ ದಿನ ವಿಜೃಂಭಣೆಯಿಂದ ಮಾಡುತ್ತಾರೆ. ಮೊದಲು ಮನೆಯಲ್ಲಿ ಎಲ್ಲವನ್ನೂ ಶುದ್ಧಮಾಡಿ ಒಂದು ಬಟ್ಟಲಿನಲ್ಲಿ ಅಕ್ಕಿಯನ್ನು ಹಾಕಿ ಅದರ ಮೇಲೆ ಗೌರಿಯ ಮೂರ್ತಿಯನ್ನು ಇಟ್ಟು ಗೌರಿಯನ್ನು ಪೂಜಿಸುತ್ತಾರೆ. ನಂತರ ಎರಡನೆಯ ದಿನ ಗೌರಿಯ ಪಕ್ಕದಲ್ಲೇ ಗಣೇಶನ ಮೂರ್ತಿಯನ್ನು ಇಟ್ಟು ಪೂಜಿಸುತ್ತಾರೆ. ಇನ್ನು ಮದುವೆಯಾದ ಹೆಣ್ಣು ಮಕ್ಕಳಿಗೆ ತವರುಮನೆಯಿಂದ ಬಾಗೀನ ತರುವ ಪದ್ಧತಿ ಈ ಗೌರಿಗಣೇಶ ಹಬ್ಬದಲ್ಲಿ ಕಂಡುಬರುತ್ತದೆ. ಮಹಿಳೆಯರು ತನ್ನ ಗಂಡ ಕಟ್ಟಿದ ತಾಳಿಗೆ ಹೆಚ್ಚು ವರ್ಷಗಳ ಭಾಗ್ಯಕ್ಕಾಗಿ ಅರ್ಥಾತ್ ಮುತ್ತೈದೆ ಭಾಗ್ಯಕ್ಕಾಗಿ ಗೌರಿಪೂಜೆಯನ್ನು ಮಾಡುತ್ತಾರೆ. ದೇವಿಯನ್ನು ಅರ್ಚಿಸಿ, ಫಲ, ಪುಷ್ಪ, ತಾಂಬೂಲವನ್ನು ಇಟ್ಟು ಧೂಪ, ದೀಪ, ನೈವೇದ್ಯವನ್ನು ಕೈಗೊಳ್ಳುತ್ತಾರೆ. ಸಾಮಾನ್ಯವಾಗಿ ಹೆಣ್ಣಿಗೆ ತವರುಮನೆಯಿಂದ ಸೀರೆ, ಹಣ್ಣು ಹೂ, ಇತ್ಯಾದಿ ಪೂಜಾ ವಸ್ತುಗಳನ್ನು ನೀಡಲಾಗುತ್ತದೆ. ಆಕೆಯು ತನ್ನ ಗಂಡನ

ಮನೆಯಲ್ಲಿ ಅದನ್ನೆಲ್ಲ ಇಟ್ಟು ಪೂಜೆ ಮಾಡುತ್ತಾಳೆ. ನಂತರ ಅಕ್ಕಪಕ್ಕದ ಮನೆಯ ಮುತ್ತೈದೆಯರನ್ನು ಕರೆದು ಅರಿಶಿನ ಕುಂಕುಮವನ್ನು ಇಟ್ಟು ಪೂಜೆಗೆ ಇಟ್ಟಿರುವ ಫಲಪುಷ್ಪಗಳನ್ನು, ಬಳೆಗಳನ್ನು ಇಟ್ಟು ಮುತ್ತೈದೆಯರಿಗೆ ನೀಡುತ್ತಾರೆ. ಗೌರಿಹೆಣ್ಣು ಮಂಗಳೋಪಾದಿಯಲ್ಲಿ ಬರುವಳೆಂದು ಗಣೇಶನು ತಾಯಿಯನ್ನು ಕರೆದುಕೊಂಡು ಹೋಗಲು ಬರುವನೆಂದು ನಂಬಿಕೆ ಹೀಗಾಗಿ ಈ ಗೌರಿಗಣೇಶ ಹಬ್ಬದಲ್ಲಿ ಹೆಣ್ಣು ಮಕ್ಕಳಿಗೆ ಗೌರಿ ಬಾಗೀನವನ್ನು ಕೊಡುವ ಪದ್ಧತಿ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ವ್ಯಾಪಕವಾಗಿ ಕಂಡುಬರುತ್ತದೆ.

ಇನ್ನು ವಿಘ್ನವಿನಾಯಕ, ಸಿದ್ದಿಬುದ್ಧಿ, ಅಭೀಷ್ಟದಾಯಕ, ಶಕ್ತಿಯ ಅದಿದೈವ ಶ್ರೀ ಗಣಪತಿ, ಯಾವುದೇ ಶುಭಕಾರ್ಯ ನಡೆಯುವಾಗಲೂ ಗಣೇಶನ ಪೂಜೆಯೊಂದಿಗೆ ಪ್ರಾರಂಭಗೊಳ್ಳುತ್ತದೆ. ಸಾಮಾನ್ಯವಾಗಿ ನನ್ನ ಅಧ್ಯಯನದ ವ್ಯಾಪ್ತಿಯ ಬಹುಪಾಲು ಗ್ರಾಮಗಳಲ್ಲಿ, ಮನೆಗಳಲ್ಲಿ ಸುಂದರವಾದ ಮಂಟಪ ಕಟ್ಟಿ ಗಣೇಶಮೂರ್ತಿಯನ್ನು ಇಟ್ಟು ದಿನನಿತ್ಯ ಪೂಜಿಸುತ್ತಾರೆ. ಮತ್ತು ಕಡುಬು ಮತ್ತು ಮೋದಕಗಳನ್ನು ಮಾಡಿ ನೈವೇದ್ಯ ನೀಡುತ್ತಾರೆ. ಗಣಪತಿಯನ್ನು ಸಡಗರದಿಂದ ತಂದಂತೆಯೇ ನೀರಿಗೆ ಬಿಡುವ ದಿನ ಅದಕ್ಕಿಂತ ಹೆಚ್ಚು ಸಂಭ್ರಮದಿಂದ ಹೂವಿನಿಂದ ಅಲಂಕೃತ ಮಾಡಿ ಬಣ್ಣವನ್ನು ಎರಚುತ್ತಾ, ಬೀದಿ ಬೀದಿಗಳಲ್ಲಿ ಮೆರವಣಿಗೆ ಮಾಡಿ ದೊಡ್ಡ ದೊಡ್ಡ ಬಾವಿಗಳಲ್ಲಿ ವಿಸರ್ಜನೆ ಮಾಡುತ್ತಾರೆ.

## ಶ್ರೀರಾಮನವಮಿ

ವಸಂತ ಮಾಸದ ಚೈತ್ರ ಶುದ್ಧ ನವಮಿ, ಮರ್ಯಾದಾ ಪುರುಷೋತ್ತಮನಾದ ಶ್ರೀರಾಮನ ಜನ್ಮದಿನ, ಅಂದು ಭಾರತ ದೇಶದಲ್ಲಿ ಅಸೇತು-ಶೀತಚಲ ಪರ್ಯಂತ ರಾಮೋತ್ಸವ ಪ್ರಯುಕ್ತ ಎಲ್ಲೆಲ್ಲೂ ಪೂಜೆ, ಭಜನೆ, ರಥೋತ್ಸವ, ಪಾನಕ, ಪಲ್ಲಾರ ವಿತರಣೆಯ ಸಂಭ್ರಮವೋ ಸಂಭ್ರಮ. ರಾಮೋತ್ಸವವನ್ನು ಕೆಲವೆಡೆ ನವಮಿಯಿಂದ ಮುಂದಿನ ಒಂಭತ್ತು ದಿನಗಳವರೆಗೂ ಆಚರಿಸುತ್ತಾರೆ. ಆ ನವ ದಿನಗಳೂ ನವೋತ್ಸಾಹದಿಂದ ಶ್ರೀರಾಮನಿಗೆ ಪೂಜೆ, ರಾಮಕಾರಕ ಮಂತ್ರಮಠನ ನಡೆಯುತ್ತದೆ. ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಗ್ರಾಮಗಳಲ್ಲೂ ರಾಮನವಮಿಯನ್ನು ವಿಜೃಂಭಣೆಯಿಂದ ಮಾಡುತ್ತಾರೆ. ಮನೆಯನ್ನು ಶುಭ್ರಮಾಡಿ ಮನೆಮಂದಿಯು ಶುಭ್ರರಾಗಿ ಪೂಜೆಯನ್ನು ಮಾಡುತ್ತಾರೆ. ಮತ್ತು ವಿಶೇಷವಾಗಿ ಬೆಲ್ಲದ ಪಾನಕ ಮತ್ತು ಕಡಲೇಬೇಳೆ ಅಥವಾ ಹೆಸರುಬೇಳೆಯ ಪಲ್ಲಾರವನ್ನು ಮಾಡಿ ಅದನ್ನು ನೈವೇದ್ಯಕ್ಕೆ ಇಡುತ್ತಾರೆ. ನಂತರ ಮನೆಯವರೆಲ್ಲಾ ಪಾನಕ ಪಲ್ಲಾರ ಸವಿದು ಸುತ್ತಮುತ್ತಲಿನವರಿಗೂ ಹಂಚುತ್ತಾರೆ. ಈಶ್ವರ ದೇವಾಲಯಗಳಲ್ಲಿ ವಿಶೇಷ ಪೂಜಾ ಕೈಂಕರ್ಯಗಳು ನಡೆದು ಅಲ್ಲಿಯೂ ಪಾನಕ ಪಲ್ಲಾರವನ್ನು ನೈವೇದ್ಯ ನೀಡಿ ಭಕ್ತಾದಿಗಳಿಗೆಲ್ಲಾ ಅದನ್ನು ನೀಡುತ್ತಾರೆ.

## ದೀಪಾವಳಿ

ತಮಸೋಮ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃಂತಗಮಯ ಎಂಬ ಉಪನಿಷದ್ ವಾಣಿಯಂತೆ ನಮ್ಮನ್ನು ಕತ್ತಲೆಯಿಂದ ಬೆಳಕಿನೆಡೆಗೆ ಮೃತ್ಯುವಿನಿಂದ ಅಮೃತದೆಡೆಗೆ ಒಯ್ಯುವ ಹಬ್ಬವೇ ಬೆಳಕಿನ ಹಬ್ಬ, ದೀಪಾವಳಿ, ಬಲಿಪಾಡ್ಯಮಿ, ದೀಪಾವಳಿ ಹಬ್ಬದ ವಿಶೇಷತೆಯಾಗಿದೆ. ಮಹಾದಾನವೀರ, ಬಲಿಚಕ್ರವರ್ತಿ, ಮಹಾ ವಿಷ್ಣುಭಕ್ತಿ. ಇವನ ದಾನಶೂರತ್ವವನ್ನು ಮೆಚ್ಚಿದ ಶಿವನು ಈತನಿಗೆ ಬೇಕಾದ ವರವನ್ನು ಕೇಳು ಎಂದು ಹೇಳಿದಾಗ ೩ ದಿನ ನನ್ನ ರಾಜ್ಯವನ್ನು ನೋಡುವ ಅವಕಾಶಕೊಡು ಎಂದು ಬೇಡುತ್ತಾನೆ. ಈ ೩ ದಿನ ಯಾರೂ ದೀಪ ಬೆಳಗುತ್ತಾರೋ ಅವರ ಮನೆಯಲ್ಲಿ ನಿನ್ನ ಸಹಧರ್ಮಿಣಿ ಮಹಾಲಕ್ಷ್ಮಿ ಸ್ಥಿರವಾಗಿ ನೆಲೆಸಲಿ. ಹಾಗೇ ನನ್ನ ಮನೆಯ ಬಾಗಿಲಲ್ಲಿ ಸದಾ ನಿನ್ನ ಸಾನಿಧ್ಯವಿರಲಿ ಎಂದು ಬೇಡಿಕೊಂಡ. ಹಾಗಾಗಿ ಈ ದೀಪಾವಳಿ ಹಬ್ಬವನ್ನು ೩ ದಿನ ಆಚರಿಸುತ್ತಾರೆ. ಮತ್ತು ಬಲಿಚಕ್ರವರ್ತಿಯ ನೆನಪಿಗಾಗಿ ಈ ದಿನಗಳಲ್ಲಿ ಬಾಗಿಲಿನ ಹೊಸ್ತಿಲನ್ನು ಯಾರೂ ತುಳಿಯುವುದಿಲ್ಲ. ಈ ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಈ ಹಬ್ಬದಲ್ಲಿ ಹಸುವಿನ ಸಗಣಿ ತಂದು ದಪ್ಪ ಉಂಡೆಗಳಾಗಿ ಮಾಡಿ ಅದಕ್ಕೆ ಜೋಳದ ರಾಗಿಯ, ಸಜ್ಜೆಯ, ಭತ್ತದ, ಅವರೆ, ತೊಗರಿ ತೆನೆಗಳನ್ನು ಚುಚ್ಚಿ ಬಾಗಿಲಿನ ಎರಡೂ ಬದಿಗಳಿಗೆ ಇಡುತ್ತಾರೆ. ಮತ್ತು ಅಂಚೆಕಡ್ಡಿಯನ್ನು ಅಥವಾ ಅಂಚೆಹುಲ್ಲನ್ನು ತಂದು ಅದನ್ನು ಜಡೆಯ ರೀತಿಯಲ್ಲಿ ಎಣೆಯುತ್ತಾರೆ. ಇದು ಸುಮಾರು ೩–೪ ಅಡಿ ಉದ್ದವಿರುತ್ತದೆ. ಇದನ್ನು ಬಾಗಿಲಿನ ಎರಡೂ ಬದಿಗಳಲ್ಲಿ ನಿಲ್ಲಿಸುತ್ತಾರೆ. ಮತ್ತು ಅಣ್ಣೆ ಸೊಪ್ಪಿನ ತೆನೆ, ಉಚ್ಚಳ್ಳು, ಹೂ, ಕುಂಬಳ ಹೂಗಳಿಂದ ಬಾಗಿಲನ್ನು ಅಲಂಕರಿಸಲಾಗುತ್ತದೆ. ಮತ್ತು ಅವರವರ ಶಕ್ತ್ಯಾನುಸಾರ ಮನೆಗಳ ಮುಂದೆ, ಹೊರಗೆ, ಬಾಗಿಲಲ್ಲಿ ದೀಪಗಳನ್ನು ಸಂಜೆಯ ವೇಳೆಗೆ ಹಚ್ಚಿ ಸಂತೋಷದಿಂದ ಪೂಜೆಯನ್ನು ಮಾಡುತ್ತಾರೆ. ಈ ದಿನ ಯಾರೂ ಬಾಗಿಲನ್ನು ಮತ್ತು ಬಾಗಿಲಿನ ಹೊಸ್ತಿಲನ್ನು ತುಳಿಯಬಾರದು ಎಂದು ಹೇಳುತ್ತಾರೆ. ನಂತರದಲ್ಲಿ ರಾತ್ರಿ ಎಲ್ಲರೂ ಸೇರಿ ಪಟಾಕಿ, ಮದ್ದುಗಳನ್ನು ಹಚ್ಚಿ ಸಿಡಿಸಿ ಸಂತೋಷದಿಂದ ಹಬ್ಬವನ್ನು ಆಚರಿಸುತ್ತಾರೆ.

## ಜಾತ್ರೆಗಳು ಮತ್ತು ಉತ್ಸವಗಳು

ಜಾತ್ರೆಗಳು ಜಾನಪದ ಜೀವನದ ಅವಿಭಾಜ್ಯಂಗವಾಗಿರುವಂತೆಯೇ ಜಾನಪದ ಸಂಸ್ಕೃತಿಯ ವಿಕಾಸಕ್ಕೆ ಚೈತನ್ಯದಾಯಹಿಗಳಾಗಿವೆ. ಅವುಗಳ ತಾಯಿಬೇರು ಭೂತಕಾಲದ ಗರ್ಭದಲ್ಲಿ ಹೂತುಕೊಂಡಿದ್ದು, ಅವು ಆದಿ ಮಾನವನ ಕಾಲದಿಂದಲೇ ಧಾರ್ಮಿಕಾಚಾರಣೆಗಳ ಒಂದು ಪ್ರಮುಖ ಭಾಗವಾಗಿ ರೂಢಿಯಲ್ಲಿದ್ದಿರಬೇಕೆಂದು ತೋರುತ್ತದೆ. ಸಾಮಾನ್ಯವಾಗಿ ಆದಿ ಮಾನವನ ಕಾಲದ ದೇವತಾರಾಧನೆಯೇ ಮೊದಲಾದ ಧಾರ್ಮಿಕಾಚರಣೆಗಳು ಸಾಮೂಹಿಕವಾಗಿಯೇ

ನೆಡಯುತ್ತಿರಬೇಕು. ಅವನು ನಿರಂತರವಾಗಿ ಅಲೆಮಾರಿತನದಿಂದ ಪಾರಾಗಿ, ತಾತ್ಕಾಲಿಕವಾಗಿ ಯಾದರೂ ನೀರು ನೆರಳು ಹೊರತಾದ ನೆಲ ಕಂಡಕಡೆ ನೆಲೆಯೂರಿದ ನಂತರ, ಅಲೆಮಾರಿ ಜನ ಬುಡಕಟ್ಟಿನ ಜನರಾಗಿ ಪರಿವರ್ತನೆಗೊಂಡ ಸಂದರ್ಭದಲ್ಲಿ ಜಾತ್ರೆಗಳು ಸರಳ ಮೂಲಾವಸ್ಥೆಯಲ್ಲಿ ಕಾಣಿಸಿಕೊಂಡಿರಬೇಕು. ಮೊದಮೊದಲು ಕುಣಿತ, ಹಾಡು, ಬಲಿ, ಮಂತ್ರ, ಮಾಟಗಳೇ ಪೂಜಾವಿಧಿಗಳಾಗಿದ್ದಿರಬೇಕು. ಕಾಲಕ್ರಮೇಣ ಸಮಾಜದ ರೀತಿನೀತಿಗಳು ಬದಲಾವಣೆ ಗೊಂಡಂತೆ, ದೇವರ ಕಲ್ಪನೆ ವ್ಯತ್ಯಾಸಗೊಂಡಂತೆ, ಮತೀಯ ತತ್ವಗಳು ವಿಕಾಸಗೊಂಡಂತೆ ಧಾರ್ಮಿಕಾಚರಣೆಗಳು ಸಂಕೀರ್ಣವಾಗುತ್ತವೆ. ಜನಜೀವನದ ಮಾರ್ಪಾಟಿನಂತೆ ಜಾತ್ರೆಗಳೂ ಪ್ರಾಚೀನ ಕಲ್ಪನೆಗೂ ಎಟುಕದ ಹೊಸ ಹೊಸ ಸಂಗತಿಗಳನ್ನು ಗರ್ಭೀಕರಿಸಿಕೊಂಡು ಅಳತೆಯಿಲ್ಲದೆ ಬೆಳೆಯುತ್ತವೆ.

ಜಗತ್ತಿನ ಎಲ್ಲ ಜನಾಂಗಗಳಲ್ಲಿಯೂ ಸಾಮಾಜಿಕಾರ್ಥಿಕ, ಸಾಂಸ್ಕೃತಿಕ, ಧಾರ್ಮಿಕ ಪ್ರಯೋಜನಗಳಿಗೆ ಕಾರಣವಾದ ಜಾತ್ರೆಗಳ ಪ್ರಾಬಲ್ಯವನ್ನು ಒಂದಲ್ಲ ಒಂದು ರೂಪದಲ್ಲಿ ಕಾಣಬಹುದು. ಅವು ಒಂದರ ಅನುಕರಣ ಮತ್ತೊಂದೆಂದು ಹೇಳುವಂತಿಲ್ಲ. ಏಕಕಾಲದಲ್ಲಿಯೇ ಬೇರೆ ಬೇರೆ ಕಾಲಗಳಲ್ಲಿಯೇ ಅವು ಸ್ವತಂತ್ರವಾಗಿಯೇ ತಲೆಯೆತ್ತಿದರೂ, ಕೆಲವೊಮ್ಮೆ ಅನುಕರಣದ ದ ಮೂಲಕ ಸಾದೃಶ್ಯಗಳು ಹೆಣೆದುಕೊಂಡಿರಬಹುದು. ಮನುಷ್ಯನ ಮನಸ್ಸು ಒಂದೇ ತೆರನಾಗಿ ಕೆಲಸ ಮಾಡುವುದರಿಂದಲು ಜಾತ್ರೆಗಳ ರೂಪ ಸ್ವರೂಪ, ರೀತಿ ವಿಧಾನಗಳಲ್ಲಿ ಸಾಮ್ಯಗಳು ಕಾಣಿಸಿಕೊಂಡರೆ ಅಚ್ಚರಿಗೊಳ್ಳಲಾಗದು. ಪರಿಸರ ಸನ್ನಿವೇಶ, ಮತೀಯಶಕ್ತಿ, ಜನಾಭಿರುಚಿ ಮತ್ತು ಯುಗ ಧರ್ಮಗಳಿಗನುಗುಣವಾಗಿ ಅವುಗಳಲ್ಲಿ ವೈದೃಶ್ಯಗಳು ವಿಶೇಷವಾಗಿ ಗೋಚರವಾಗು ವುದುಂಟು.[೧೭]

ಕನ್ನಡ ನಾಡಿನಲ್ಲಿ ಜಾತ್ರೆಗಳು ಎಂದು ಆರಂಭವಾದವೆಂದು ಸಾಧಾರಣವಾಗಿ ಹೇಳಲಾಗದು. ಮೊಟ್ಟಮೊದಲಿಗೆ ಬ್ರಹ್ಮ ಶಿವನ ಸಮಯ ಪರೀಕ್ಷೆ, ಮತ್ತು ಜನ್ನನ ಯಶೋಧರ ಚರಿತ್ರೆಗಳಲ್ಲಿ ಜಾತ್ರೆಗಳ ವಿವರಣೆ ಬರುತ್ತದೆ. 'ತೇರು' ಎನ್ನುವ ಪದ ಪ್ರಪ್ರಥಮವಾಗಿ ಪಂಪನಲ್ಲಿ ದೊರೆಯುತ್ತದೆ. 'ಯಾತ್ರಾ' ಎಂಬ ಶಬ್ದವೇ ಕನ್ನಡದ 'ಜಾತ್ರೆ'ಯಾಗಿದೆ. ಯಾತ್ರಾಪದಕ್ಕೆ ಅನೇಕ ಅರ್ಥಗಳಿವೆ. ಚಲನೆ, ಪ್ರಯಾಣ, ಸೈನ್ಯಾಕ್ರಮಣ, ತೀರ್ಥಯಾತ್ರೆ, ಹಬ್ಬ, ಸಂತೆ, ಮೆರವಣಿಗೆ, ಮನರಂಜನೆ, ಕನ್ನಡದಲ್ಲಿ ಯಾತ್ರೆ ಮತ್ತು ಜಾತ್ರೆ ಎಂಬೆರಡು ಶಬ್ದಗಳೂ ರೂಢಿಯಲ್ಲಿದ್ದು, 'ಯಾತ್ರಾ' ಪದದ ಮೂಲಾರ್ಥವನ್ನೆಲ್ಲಾ ಅವೆರಡು ಹಂಚಿಕೊಂಡಿವೆ.

ದೇವರ ರಥೋತ್ಸವವೂ ಜಾತ್ರೆಗಳಲ್ಲಿಯೇ ಅಡಕಗೊಳ್ಳುತ್ತದೆ.[೧೮] ಪ್ರಸ್ತುತ ಕಣಕಟ್ಟೆ ಹೋಬಳಿ ಪರಿಸರದಲ್ಲಿ ಮುಕ್ಕಣೇಶ್ವರಿ ದೇವಿಜಾತ್ರೆ, ರಾಮೇಶ್ವರನ ಜಾತ್ರೆ, ಬಿಳಿಕಲ್ಲು ಲಕ್ಷ್ಮೀ ರಂಗನಾಥ

ಸ್ವಾಮಿ ಜಾತ್ರೆ, ಗಂಗಮಾಳಮ್ಮ ಜಾತ್ರೆ, ಬಸವೇಶ್ವರ ಜಾತ್ರೆ ಇನ್ನೂ ಮುಂತಾದ ಜಾತ್ರೆಗಳು ನಡೆಯುತ್ತವೆ.

## ಶ್ರೀಮುಕ್ಕಣ್ಣೇಶ್ವರಿ ದೇವಿ ಜಾತ್ರೆ ಮತ್ತು ಉತ್ಸವ

ಇಲ್ಲಿನ ಹೊಳಲ್ಕೆರೆ ಗ್ರಾಮದಲ್ಲಿ ನೆಲೆಯಾಗಿರುವ ಮುಕ್ಕಣೇಶ್ವರಿ ದೇವಿ ಜಾತ್ರೆಯು ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಇದನ್ನು ಹೊಳಲ್ಕೆರಜ್ಜಿ, ಬಾನಾ ಎಂದೂ ಸಹ ಕರೆಯುತ್ತಾರೆ. ಈ ಜಾತ್ರೆಯು ಮೂರು ದಿನಗಳ ಕಾಲ ನಡೆಯುತ್ತದೆ. ಮೊದಲು ಜಾತ್ರೆಯ ದಿನಾಂಕವನ್ನು ನಿಗಧಿ ಮಾಡುವ ಮೊದಲು ದೇವಿಯಲ್ಲಿ ಅಪ್ಪಣೆಯನ್ನು ಕೇಳುತ್ತಾರೆ. ದೇವಿಯು ಇಂತಹುದೇ ದಿನಾಂಕದಂದು ಜಾತ್ರೆ ಮಾಡಿ ಎಂದು ಅಪ್ಪಣೆ ಕೊಟ್ಟಾಗ ಜನರೆಲ್ಲಾ ಸೇರಿ ಇಂತಹ ದಿನವೆಂದು ಗುರುತು ಮಾಡಿ ಆ ದಿನವನ್ನು ಸುತ್ತಮುತ್ತಲಿನ ಹಳ್ಳಿಯವರಿಗೆಲ್ಲ ತಿಳಿಸಲು ಒಬ್ಬ ವ್ಯಕ್ತಿಯನ್ನು ನೇಮಿಸುತ್ತಾರೆ. ಈತನು ಪರಿಶಿಷ್ಟ ಜಾತಿಗೆ ಸೇರಿದವನಾಗಿದ್ದು, ಒಂದು ತಮಟೆಯನ್ನು ಕೈಯಲ್ಲಿ ಹಿಡಿದು ಎಲ್ಲಾ ಊರುಗಳಿಗೂ ಹೋಗಿ ಇಂತಹ ದಿನ ದೇವಿಯ ಜಾತ್ರೆ ಇದ್ದು, ಎಲ್ಲರೂ ಸೇರಿ ಒಟ್ಟಾಗಿ ಆಚರಿಸಬೇಕೆಂದು ಹೇಳುತ್ತಾನೆ.

ಸಾಮಾನ್ಯವಾಗಿ ಈ ದೇವಿಯ ಜಾತ್ರೆಯು ಮಂಗಳವಾರದಂದು ಪ್ರಾರಂಭವಾಗಿ ಗುರುವಾರ ದೇವಿಯ ಸಿಡಿ ಅಂದರೆ ಜಾತ್ರೆ ಆಗುವುದರೊಂದಿಗೆ ಮುಕ್ತಾಯಗೊಳ್ಳುತ್ತದೆ. ಈ ಜಾತ್ರೆಯು ಹೊಳಲ್ಕೆರೆ, ರಾಂಪುರ, ಶಶಿವಾಳ, ದೊಡ್ಡಮೇಟಿಕುರ್ಕೆ, ಇನ್ನೂ ಹಲವಾರು ಗ್ರಾಮಗಳನ್ನೊಳಗೊಂಡು ನಡೆಯುತ್ತದೆ. ಮಂಗಳವಾರವು ಬೆಳಿಗ್ಗಿನ ೧೧ ಘಂಟೆಯ ವೇಳೆಗೆ ದೇವಿಗೆ ಕುರಿಯನ್ನು ಬಲಿಕೊಡುತ್ತಾರೆ. ಇದರಲ್ಲಿ ಆ ಗ್ರಾಮದ ಗ್ರಾಮಸ್ಥರೆಲ್ಲ ಸೇರುತ್ತಾರೆ. ಈ ಕುರಿಗಳನ್ನು ದೇವಿಯ ಎದುರಿಗೆ ಬಲಿಕೊಡುತ್ತಾರೆ. ಎಲ್ಲಾ ಗ್ರಾಮಗಳಲ್ಲಿಯೂ ದೇವಿಯು ಪ್ರತ್ಯಕ್ಷವಾಗಿ ಸಿಗಲು ಸಾಧ್ಯವಾಗದ್ದರಿಂದ ಉಳಿದ ಗ್ರಾಮಗಳಲ್ಲಿ ಬೇವಿನ ಸೊಪ್ಪಿನ ಕಳಶವನ್ನು ಮಾಡಿ ದೇವಿಯಿಂದ ಪೂಜಿಸಿ ಅರೆವಾದ್ಯಗಳ ಸಮೇತ ಈ ಕಾರ್ಯ ಮಾಡುತ್ತಾರೆ. ನಂತರ ರಾತ್ರಿ ಏಳು ಗಂಟೆಯ ವೇಳೆಗೆ ಪ್ರತಿಯೊಂದು ಗ್ರಾಮದಿಂದಲೂ ಆರತಿ ಬಾನವನ್ನು ತೆಗೆದುಕೊಂಡು ಹೊಳಲ್ಕೆರೆಗೆ ಹೋಗುತ್ತಾರೆ. ಆರತಿ ಬಾನವೆಂದರೆ ಆರತಿ ಎಂದರೆ ಕಡಲೆಹಿಟ್ಟು ಬೆಲ್ಲದಿಂದ ತಂಬಿಟ್ಟು ಮಾಡಿ ಅದನ್ನು ಒಂದು ಚಿಕ್ಕ ಬಟ್ಟಲಿನಲ್ಲಿಟ್ಟು ಬಟ್ಟಲಿನ ಸುತ್ತಲೂ ಕಡ್ಡಿಯಲ್ಲಿ ಸಿಕ್ಕಿಸಿದ ಕಣಗಲೆ ಹೂವನ್ನು ಮುಡಿಸುತ್ತಾರೆ. ತಂಬಿಟ್ಟಿನ ಮೇಲೆ ಒಂದು ವೀಳ್ಯದ ಎಲೆ ಇಟ್ಟು ಅದರ ಮೇಲೆ ದೀಪವನ್ನಿಟ್ಟು ಹಚ್ಚಿಕೊಳ್ಳುತ್ತಾರೆ. ಜೊತೆಗೆ ಬಲಿಯಿಂದ ಮಾಡಿದ್ದನ್ನು ಪ್ರತಿಯೊಂದು ಮನೆಯವರೆಲ್ಲ ಸೇರಿ ಒಂದು ದೊಡ್ಡ ಪಾತ್ರೆಯಲ್ಲಿ ಹಾಕಿ ದೇವಿಯ ನೈವೇದ್ಯಕ್ಕೆಂದು ತೆಗೆದುಕೊಳ್ಳುತ್ತಾರೆ. ಹೀಗೆ ಮಂಗಳವಾರದ ರಾತ್ರಿ ಆರತಿ ಬಾನದ ಸುತ್ತಮುತ್ತಲಿನ ಗ್ರಾಮದವರೆಲ್ಲ ಹೊಳಲ್ಕೆರೆಗೆ ಬರುತ್ತಾರೆ.

ಅಂದು ರಾತ್ರಿ ದೇವಿಯ ಉತ್ಸವ ನಡೆಯುತ್ತದೆ. ಜೊತೆಗೆ ಋತುಮತಿಯಾಗದ ಹುಡುಗಿಯ ಮೇಲೆ ಕಳಸವನ್ನು ಕೊಡುತ್ತಾರೆ. ರಾತ್ರಿ ಉತ್ಸವವಾಗಿ ಬೆಳಗಿನ ಜಾವದಲ್ಲಿ ಬೇವಿನುಡುಗೆ ಕಾರ್ಯಕ್ರಮವಿದ್ದು, ಇದು ಬೆಳಗಿನ ಜಾವ ೩ ಗಂಟೆಗೆ ಪ್ರಾರಂಭವಾಗುತ್ತದೆ. ಹರಕೆ ಹೊತ್ತ ಮಹಿಳೆಯರು, ಹುಡುಗಿಯರು, ಮೈಮೇಲೆ ಬೇವಿನ ಸೊಪ್ಪನ್ನು ಕಟ್ಟಿಕೊಂಡು ಸಾಲಾಗಿ ನಿಲ್ಲುತ್ತಾರೆ. ನಂತರ ಬೆಳಿಗ್ಗೆ ೬-೭ ಘಂಟೆ ಸಮಯದಲ್ಲಿ ಉತ್ಸವವೆಲ್ಲ ಮುಗಿದ ಮೇಲೆ ದೇವಿಗೆ ಕೋಣನ ಬಲಿಯನ್ನು ಕೊಡುತ್ತಾರೆ. ಬುಧವಾರವು ಯಾವುದೇ ಕಾರ್ಯಕ್ರಮಗಳು ಇರುವುದಿಲ್ಲ. ಗುರುವಾರ ಮಧ್ಯಹ್ನ ೧ ಗಂಟೆಯಿಂದಲೇ ಹೊಳಲ್ಕೆರೆಯಲ್ಲಿ ಜಾತ್ರೆಯು ನಡೆಯುತ್ತಿರುತ್ತದೆ. ೪.೩೦ ರಿಂದ ೫ ಗಂಟೆಯ ಒಳಗೆ ಸಿಡಿಯನ್ನು ಆಚರಿಸಲಾಗುತ್ತದೆ. ಇದರಲ್ಲಿ ಮೊದಲು ನಿರ್ದಿಷ್ಟ ಮನೆತನಕ್ಕೆ ಸೇರಿದ ವ್ಯಕ್ತಿಯನ್ನು ಆಯ್ಕೆ ಮಾಡಿ ಆತನನ್ನು ಈಚಲು ಮರಕ್ಕೆ ಹತ್ತಿಸಲಾಗುತ್ತದೆ. ದೇವಿಯು ಕೆಳಗಡೆ ಇರುತ್ತಾಳೆ. ವ್ಯಕ್ತಿಯು ಮರದ ತುದಿಯವರೆಗೆ ಹೋಗಿ ಕೆಳಗಿನಿಂದ ಎಸೆಯುವ ಹೂವಿನ ಮಾಲೆಯನ್ನು ಹಿಡಿದು ಅದನ್ನು ದೇವಿಗೆ ಹಾರದಂತೆ ಮೇಲಿನಿಂದ ಹಾಕುತ್ತಾನೆ. ನಂತರ ತೆಂಗಿನ ಕಾಯಿಯನ್ನು ಪಡೆದು ಅದನ್ನು ದೇವಿಯ ಎದುರಿಗೆ ಈಡುಗಾಯಿಯ ಹಾಗೆ ಹೊಡೆಯುತ್ತಾನೆ. ನಂತರ ಕೆಳಗಿಳಿಯುತ್ತಾನೆ. ನಂತರ ಸಿಡಿ ಕಂಬದ ತುದಿಗೆ ಮಲಗಿಸಿದ ರೀತಿಯಲ್ಲಿ ಒಬ್ಬ ವ್ಯಕ್ತಿಯನ್ನು ಕಟ್ಟುತ್ತಾರೆ. ಈ ಕಂಬವು ಸುಮಾರು ೮ ರಿಂದ ೧೦ ಮಾರು ಎತ್ತರವಿರುತ್ತದೆ. ಮತ್ತು ಇದಕ್ಕೆ ಹೂವಿನ ಅಲಂಕಾರ ಮಾಡಿ ವ್ಯಕ್ತಿಯ ಸಮೇತ ೩ ಸುತ್ತು ಈ ಕಂಬವನ್ನು ತಿರುಗಿಸುತ್ತಾರೆ. ನಂತರ ವ್ಯಕ್ತಿಯನ್ನು ಕೆಳಗಿಳಿಸಿ ಆತನನ್ನು ಬಿಡುಗಡೆಗೊಳಿಸುತ್ತಾರೆ. ಈ ರೀತಿಯಾಗಿ ಹೊಳಲ್ಕೆರೆ ಗ್ರಾಮದಲ್ಲಿ ಮುಕ್ಕಣೇಶ್ವರಿಯ ಜಾತ್ರೆ ಮತ್ತು ಉತ್ಸವವು ನಡೆಯುವುದನ್ನು ಕಾಣಬಹುದು.

**ಶ್ರೀಬಸವೇಶ್ವರ ಸ್ವಾಮಿಯ ಜಾತ್ರಾ ಮಹೋತ್ಸವ, ಚಿಕ್ಕೊಂಡಿಹಳ್ಳಿ**

ಕಣಕಟ್ಟೆ ಹೋಬಳಿ ಪರಿಸರದಲ್ಲಿ ಬರುವ ಚಿಕ್ಕೊಂಡಿಹಳ್ಳಿಯಲ್ಲಿ ಶ್ರೀಬಸವೇಶ್ವರ ಸ್ವಾಮಿಯ ಜಾತ್ರೆ ಮತ್ತು ಉತ್ಸವಗಳು ನಡೆಯುತ್ತದೆ. ಸಾಮಾನ್ಯವಾಗಿ ಏಪ್ರಿಲ್ ತಿಂಗಳಲ್ಲಿ ನಡೆಯುತ್ತದೆ. ಮೊದಲನೆ ದಿನವು ಬೆಳಿಗ್ಗೆ ೯-೧೦ ಗಂಟೆಗೆ ಊರಿನ ಗ್ರಾಮಸ್ಥರೆಲ್ಲ ಸೇರಿ ಧ್ವಜಾರೋಹಣವನ್ನು ಮಾಡುತ್ತಾರೆ. ಅಂದರೆ ಸುಮಾರು ೮ ರಿಂದು ೧೦ ಅಡಿ ಉದ್ದವಿರುವ ಧ್ವಜ ಅಥವಾ ಕಂಬವನ್ನು ಬಸವೇಶ್ವರ ದೇವಾಲಯದ ಸುತ್ತ ಒಂದು ಸುತ್ತು ಸುತ್ತಿಸಿ ದೇವಾಲಯದ ಮುಂದೆ ನೆಡುತ್ತಾರೆ. ಸಂಜೆ ೫ ಗಂಟೆಗೆ ನರಸೀಪುರದ ಎರಿವಳ್ಳಿ ಗ್ರಾಮದೇವತೆ ಶ್ರೀ ಕರ್ಲಾಳಮ್ಮದೇವಿ ಮತ್ತು ಶ್ರೀ ದೂತರಾಯ ಸ್ವಾಮಿಯವರು ಚಿಕ್ಕೊಂಡಿಹಳ್ಳಿಗೆ ಆಗಮಿಸುತ್ತಾರೆ. ಅಂದು ರಾತ್ರಿ ೮ ಗಂಟೆಗೆ ಶ್ರೀ ಗುರುಪರುವು ಇದ್ದು ಇದರಲ್ಲಿ ಸುತ್ತಮುತ್ತಲಿನ ಗ್ರಾಮಸ್ಥರೆಲ್ಲ ಭಾಗವಹಿಸುತ್ತಾರೆ.

ಎರಡನೇ ದಿನದ ಬೆಳಿಗ್ಗೆ ೮ ಗಂಟೆಯಿಂದ ೧೧ ಗಂಟೆಯವರೆಗೆ ಶ್ರೀ ಬಸವೇಶ್ವರ ಸ್ವಾಮಿಯನ್ನು ಕರೆತಂದು ಇಲ್ಲಿಯ ಗ್ರಾಮದೇವತೆಯಾದ ಕಲ್ಲಾಳಮ್ಮ ಮತ್ತು ದೂತ ರಾಯ ನೊಡಿಗೂಡಿ ಬಸವೇಶ್ವರ ಸ್ವಾಮಿಗೆ ಜಂಪೋತ್ಸವ ವಾಡಲಾಗುತ್ತದೆ. ಮಧ್ಯಹ್ನ ೧೨ ಗಂಟೆಗೆ ಮಹಾಮಂಗಳಾರತಿಯನ್ನು ಎಲ್ಲ ದೇವರಿಗೂ ಮಾಡಿ ನಂತರ ರಾತ್ರಿ ಅನ್ನದಾಸೋಹವನ್ನು ಏರ್ಪಡಿಸಲಾಗಿರುತ್ತದೆ.

**ಶ್ರೀ ಬಾಲಕೃಷ್ಣಸ್ವಾಮಿ ಹಾಗೂ ಶ್ರೀ ಗಂಗಮಾಳಿಕಾದೇವಿಯವರ ಏಕಾದಶಿ ಹಬ್ಬದ ಜಾತ್ರಾ ಮಹೋತ್ಸವ, ಮೇಲನಹಳ್ಳಿ**

ಮೇಳೇನಹಳ್ಳಿಯು ಕಣಕಟ್ಟೆ ಹೋಬಳಿ ಪರಿಸರದ ವ್ಯಾಪ್ತಿಯಲ್ಲಿ ಬರುವ ಗ್ರಾಮವಾಗಿದ್ದು, ಇಲ್ಲಿ ಏಕಾದಶಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಮತ್ತು ಆಗ ಜಾತ್ರೆ ಉತ್ಸವಗಳು ನಡೆಯುತ್ತವೆ. ಎರಡು ದಿನಗಳ ಕಾಲ ಇಲ್ಲಿ ಪೂಜಾಕೈಂಕಾರ್ಯಗಳು ನಡೆಯುತ್ತವೆ. ಮೊದಲನೆ ದಿನವು ಮುಂಜಾನೆ ೬-೩೦ ಅಥವಾ ೭ ಗಂಟೆಗೆ ಶ್ರೀ ಬಾಲಕೃಷ್ಣಸ್ವಾಮಿ ಮತ್ತು ಶ್ರೀಗಂಗ ಮಾಳಿಕಾದೇವಿಯನ್ನು ಇಲ್ಲಿನ ಹರಳಪ್ಪನಕೆರೆಗೆ ಕಳಸ ನಡೆಮುಡಿಯೊಂದಿಗೆ ಕರೆದುಕೊಂಡು ಹೋಗಿ ಗಂಗಾಸ್ನಾನವನ್ನು ಮಾಡಿಸುತ್ತಾರೆ. ಅರ್ಥಾತ್ ಪುಣ್ಯಾಭಿಷೇಕ ಮಾಡುತ್ತಾರೆ. ನಂತರ ೯-೧೦ ಗಂಟೆಗೆ ಈ ದೇವರು ಮತ್ತು ದೇವಿಯು ಗ್ರಾಮಕ್ಕೆ ಪ್ರವೇಶಿಸುತ್ತವೆ. ನಂತರ ಈ ದೇವರುಗಳ ಸಮ್ಮುಖದಲ್ಲಿ ಗ್ರಾಮದಲ್ಲಿ ಧ್ವಜವನ್ನು ನೆಡಲಾಗುತ್ತದೆ. ಅಂದು ರಾತ್ರಿ ಬಾಲಕೃಷ್ಣಸ್ವಾಮಿ ಮತ್ತು ಗಂಗಮಾಳಿಕಾದೇವಿಗೆ ಹೂವಿನ ಮಂಟಪ ಸೇವೆಯನ್ನು ಮಾಡಿ ನಂತರ ಉತ್ಸವವನ್ನು ಮಾಡಲಾಗುತ್ತದೆ. ಎರಡನೆ ದಿನವು ಜಾತ್ರೆಯು ನಡೆಯುವುದು. ಇದು ಮುಂಜಾನೆ ೫ ಗಂಟೆಗೆ ಪ್ರಾರಂಭವಾಗಿ ಬೇಟೆ ಮಣೀವು ಕಾರ್ಯಕ್ರಮವಿರುತ್ತದೆ. ಜೊತೆಗೆ ಸ್ವಾಮಿಯವರ ಹಾಗೂ ಅಮ್ಮನವರ ಉತ್ಸವವು ನಡೆಯುತ್ತದೆ. ಸಂಜೆ ಏಳುಗಂಟೆಗೆ ಮಹಾಮಂಗಳಾರತಿ ಮತ್ತು ಪಡಿಸೇವೆ ಇರುತ್ತದೆ. ಪಡಿಸೇವೆ ಎಂದರೆ ದೇವಾಲಯದ ಪೂಜಾರಿಯು ನಡೆಮುಡಿಯೊಂದಿಗೆ ಒಂದು ಜೋಳಿಗೆಯನ್ನು ಹಾಕಿಕೊಂಡು ಪ್ರತಿಯೊಂದು ಮನೆಯ ಮುಂದೆ ಬಂದು ನಿಲ್ಲುತ್ತಾರೆ. ಆಗ ಮನೆಯವರು ಈ ಪೂಜಾರಪ್ಪನಿಗೆ ಪಾದ ತೊಳೆದು ಪೂಜೆ ಮಾಡಿ ನಂತರ ಅದರ ಜೋಳಿಗೆಗೆ ರಾಗಿಯ ಹಿಟ್ಟನ್ನು ೩ ಬಾರಿ ತಮ್ಮ ಕೈಯಿಂದ ಹಾಕುವರು. ಇದನ್ನು ಪಡಿಸೇವೆ ಎನ್ನುತ್ತಾರೆ. ನಂತರ ರಾತ್ರಿ ೧೦ ಗಂಟೆಗೆ ಕಂಬದ ಸೇವೆ ಅಂದರೆ ನಾನಾ ಬಗೆಯ ಉತ್ಸವಗಳು ನಡೆಯುತ್ತವೆ. ಮತ್ತು ರಾತ್ರಿ ೧೨ ಗಂಟೆಗೆ ದೀಪೋತ್ಸವ ಬರುತ್ತದೆ. ಮತ್ತು ದುಗ್ಗಳದ ಸೇವೆಯು ನಡೆಯುತ್ತದೆ. ಈ ಜಾತ್ರೆ ಉತ್ಸವದಲ್ಲಿ ಸುತ್ತಮುತ್ತಲಿನ ಎಲ್ಲಾ ಗ್ರಾಮಸ್ಥರು ಭಾಗವಹಿಸುತ್ತಿರುತ್ತಾರೆ.

**ಅಡಿಟಿಪ್ಪಣಿಗಳು**

೧. ಮಂಜುನಾಥ ಬೇವಿನಕಟ್ಟಿ, **ಕನ್ನಡ ಜಾನಪದ ನಂಬಿಕೆಗಳು**, ಪು.೨೩-೨೬

೨. ಅದೇ, ಪು.೨೬

೩. ಶಶಿವಾಳದ ವಕ್ತೃ ಸಿದ್ದಪ್ಪನವರಿಂದ ಪಡೆದ ಮಾಹಿತಿ

೪. ಸೋಮಶೆಟ್ಟಿಹಳ್ಳಿಯ ಗ್ರಾಮಸ್ಥರಿಂದ ಪಡೆದ ಮಾಹಿತಿ

೫. ಜನ್ನಾವರದ ವಕ್ತೃ ಯೋಗೀಶ್ವರಪ್ಪನವರಿಂದ ಪಡೆದ ಮಾಹಿತಿ

೬. ಜವರೇಗೌಡ ದೇ., **ಜಾನಪದ ಮಹಾ ಸಂಪುಟ**, ಪು.೧೭೮-೧೭೯

೭. ಚಿದಾನಂದಮೂರ್ತಿ ಎಂ., **ಜನ-ಜನಪದ-ಜಾನಪದ**, ಪು.೬೬-೬೭

೮. ಜವರೇಗೌಡ ದೇ., **ಪೂರ್ವೋಕ್ತ**, ಪು.೩೬೦

೯. ಭಟ್ ಎ.ಎನ್., **ಭಾರತೀಯ ಹಬ್ಬಗಳ ವೈಶಿಷ್ಟ್ಯ**, ಪು.೧

೧೦. ಸಂಪಟೂರು ವಿಶ್ವನಾಥ, **ಹಬ್ಬಗಳು ಮತ್ತು ದಿನಾಚರಣೆಗಳು**, ಪು.೧೪

೧೧. ಭಟ್ ವಿ.ಎನ್., **ಪೂರ್ವೋಕ್ತ**, ಪು.೧೨೨

೧೨. ಅದೇ, ಪು.೧

೧೩. ನರಸಿಂಹಮೂರ್ತಿ ಹೆಚ್.ವಿ., **ನಮ್ಮ ಹಬ್ಬಗಳು**, ಪು.೧೩೫

೧೪. ಭಟ್ ವಿ.ಎನ್., **ಪೂರ್ವೋಕ್ತ**, ಪು.೩೮

೧೫. ಅದೇ, ಪು.೧೦೦

೧೬. ಜವರೇಗೌಡ ದೇ., **ಪೂರ್ವೋಕ್ತ**, ಪು.೫೨೧

೨೦. ಅದೇ

೨೧. ಅದೇ, ಪು.೫೨೧-೫೨೨

## ಅಧ್ಯಾಯ ಆರು

# ಸಮಾರೋಪ

ಭಾರತವು ಪರಂಪರಾನುಗುಣವಾಗಿ ಸಂಸ್ಕೃತಿ ಮತ್ತು ಐತಿಹಾಸಿಕತೆಯನ್ನು ಹೊಂದಿರುವ ಮತ್ತು ಅದಕ್ಕಾಗಿ ಹೆಸರುವಾಸಿಯಾಗಿರುವ ಅದನ್ನು ವರ್ತಮಾನದಲ್ಲಲ್ಲದೆ, ಭವಿಷ್ಯತ್ ಕಾಲಕ್ಕೂ ಮುಂದುವರೆಸಿಕೊಂಡು ಹೋಗುತ್ತಿರುವ ದೇಶವಾಗಿದೆ. ಇದರಲ್ಲಿ ಕರ್ನಾಟಕ ರಾಜ್ಯವೂ ಒಂದಾಗಿದೆ. ಕರ್ನಾಟಕವೂ ಸಹ ತನ್ನದೇ ಆದ ಸಂಸ್ಕೃತಿ, ಆಚಾರ ವಿಚಾರ, ಧಾರ್ಮಿಕತೆಯನ್ನು ಹೊಂದಿದೆ. ಇಲ್ಲಿ ಹಲವು ರಾಜಮನೆಗಳು ಆಳ್ವಿಕೆ ಮಾಡಿವೆ. ಅವು ತನ್ನದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಇಲ್ಲಿ ನಿರ್ಮಿಸಿರುವ ದೇವಾಲಯಗಳು, ಶಾಸನಗಳ ಮೂಲಕ ತಿಳಿಯಪಡಿಸುತ್ತವೆ. ಇಂತಹ ಪ್ರದೇಶದಲ್ಲಿ ಪಾರಂಪರಿಕ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿರುವ ಕಣಕಟ್ಟೆ ಹೋಬಳಿಯು ಒಂದಾಗಿದೆ. ಇದರ ವ್ಯಾಪ್ತಿಯಲ್ಲಿ ಪ್ರಾಚೀನ ದೇವಾಲಯಗಳು, ಮೂರ್ತಿಶಿಲ್ಪಗಳು, ಶಿಲಾಶಾಸನಗಳು, ವೀರಗಲ್ಲು, ಮಹಾಸತೀ ಕಲ್ಲು, ನಿಷಧಿಕಲ್ಲುಗಳು ಮುಂತಾದವುಗಳು ಇಂದಿಗೂ ತಮ್ಮ ಸಂಸ್ಕೃತಿಯನ್ನು ಭೂತಕಾಲದ ವಿಚಾರಗಳನ್ನು ತಿಳಿಸುವ ಮೂಕ ಮತ್ತು ಮೂಲ ಸಾಕ್ಷಿ ಗಳಾಗಿ ಪ್ರತಿಬಿಂಬಿಸುತ್ತವೆ.

ಪ್ರಸ್ತುತ ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ ಎಂಬ ಪ್ರಬಂಧವು ಕಣಕಟ್ಟೆ ಪರಿಸರದ ಸಾಂಸ್ಕೃತಿಕತೆಯನ್ನು ಅದರ ಐತಿಹಾಸಿಕತೆಯನ್ನು, ಪರಂಪರೆಯನ್ನು ಕುರಿತ ಅಧ್ಯಯನವಾಗಿದೆ. ಈ ಹೋಬಳಿಯನ್ನು, ಕುರಿತಂತೆ ಈವರೆಗೆ ವಿವರವಾದ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬೇಕಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಅಂತಹ ಒಂದು ಪ್ರಾಮಾಣಿಕ ಪ್ರಯತ್ನವನ್ನು ಮಾಡಲಾಗಿದೆ. ಈ ಪರಿಸರದ ಸ್ಥಳೀಯ ಚರಿತ್ರೆಯನ್ನು ವಿಶ್ಲೇಷಣಾತ್ಮಕ ಹಾಗೂ ವಿವರಣಾತ್ಮಕವಾಗಿ ಕಟ್ಟಿಕೊಡುವ ಹಿನ್ನೆಲೆಯಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯವನ್ನು ಕೈಗೊಂಡು ಈ ಪರಿಸರದ ಸಂಸ್ಕೃತಿಯನ್ನು ಈ ಪ್ರಬಂಧದಲ್ಲಿ ಪ್ರತಿಬಿಂಬಿಸಲಾಗಿದೆ. ಇದನ್ನು ತಿಳಿಯುವಲ್ಲಿ ಇಲ್ಲಿ ದೇವಾಲಯಗಳು, ಮೂರ್ತಿಶಿಲ್ಪಗಳು, ಹೆಚ್ಚಾಗಿ ದೊರೆತಿರುವ ಶಾಸನಗಳು ಪ್ರಮುಖ

ಆಕರಗಳಾಗಿವೆ. ಒಂದು ಪ್ರದೇಶ ಸಾಂಸ್ಕೃತಿಕ ಇತಿಹಾಸವೆಂದರೆ ಆ ಪ್ರದೇಶದ ಅಥವಾ ಸಮಾಜದ ಜನರ ಜೀವನ ವಿಧಾನವೇ ಆಗಿದೆ. ತಮ್ಮ ಬದುಕಿನಲ್ಲಿ ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಸಮಾಜದ ವೈವಿಧ್ಯತೆ ಮುಂತಾದವುಗಳ ವಿವರಣೆಯೇ ಆಗಿದೆ. ಒಟ್ಟಾರೆಯಾಗಿ ಈ ಪರಿಸರದ ಚರಿತ್ರೆಯನ್ನು ಸಮಗ್ರವಾಗಿ ರಚಿಸುವ ಸಲುವಾಗಿ ಸೂಕ್ಷ್ಮ ಸಂಗತಿಗಳನ್ನು ಅರಿಯುವ ಪ್ರಯತ್ನ ಮಾಡಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಸಮಗ್ರ ಚಿತ್ರಣವನ್ನು ನಿರೂಪಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕಣಕಟ್ಟೆ ಪರಿಸರದ ಸಾಂಸ್ಕೃತಿಕ ಅಧ್ಯಯನದಲ್ಲಿ ಹೋಬಳಿ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳ ಪಾರಂಪರಿಕ ಸಂಸ್ಕೃತಿಯನ್ನು ಕಟ್ಟಿಕೊಡುವ ಪ್ರಮಾಣಿಕ ಪ್ರಯತ್ನವನ್ನು ಮಾಡಲಾಗಿದೆ. ಇಂತಹ ಒಂದು ಪ್ರಯತ್ನದಿಂದ ಕಣಕಟ್ಟೆಯ ಪರಿಚಯ ಇಲ್ಲಿನ ಭೌಗೋಳಿಕತೆ, ಜನಸಂಪತ್ತು, ವಾಯುಗುಣ, ಭೂ ಮೇಲ್ಮೈನ ಸಮಾರೋಪಗಳ ಚಿತ್ರಣವನ್ನು ನೀಡಲಾಗಿದೆ ಮತ್ತು ಚಾರಿತ್ರಿಕ ಹಿನ್ನೆಲೆಗೆ ಸಂಬಂಧಿಸಿದಂತೆ ಕಣಕಟ್ಟೆ ಪ್ರದೇಶವು ಒಂದು ಆಯಕಟ್ಟಿನ ಭಾಗವಾಗಿರುವುದರಿಂದ ಇಲ್ಲಿ ಗಂಗರು, ಹೊಯ್ಸಳರು, ವಿಜಯನಗರದ ಅರಸರು, ಮತ್ತು ಪಾಳೆಗಾರರು, ಮೈಸೂರು ಒಡೆಯರು ಆಳ್ವಿಕೆ ಮಾಡಿದ್ದಾರೆ. ಇವರು ಆಳ್ವಿಕೆ ಮಾಡಿದ ಕುರುಹುಗಳಾಗಿ ಅನೇಕ ದೇವಾಲಯಗಳು, ಶಾಸನಗಳು ಲಭ್ಯವಿವೆ. ಈ ದೇವಾಲಯಗಳು ಸಾಂಸ್ಕೃತಿಕ ಕೇಂದ್ರಗಳಾಗಿ ಸಮಾಜವನ್ನು ಒಗ್ಗೂಡಿಸುವಲ್ಲಿ ಬಹುಮುಖ್ಯ ಪಾತ್ರವಹಿಸಿದೆ. ಈ ಪರಿಸರದಲ್ಲಿ ಶೈವ ದೇವಾಲಯಗಳು ಅಧಿಕವಾಗಿದ್ದು, ಸಾಂಸ್ಕೃತಿಕವಾಗಿ ಮತ್ತು ಭಾವನಾತ್ಮಕವಾಗಿ ಶೈವಾರಾಧನೆ ಇದ್ದುದನ್ನು ಮತ್ತು ಈಗಲೂ ಇರುವುದನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ. ಜೊತೆಗೆ ವೈಷ್ಣವ ದೇವಾಲಯಗಳು ಅಲ್ಪಪ್ರಮಾಣದಲ್ಲಿ ಈ ಪರಿಸರದಲ್ಲಿ ಲಭ್ಯವಿವೆ ಹಾಗೂ ಜೈನ ಬಸದಿಗಳ ಬಗ್ಗೆ ಶಾಸನಗಳಲ್ಲಿ ಆಧಾರಗಳು ಸಿಕ್ಕಿದರೂ ಪ್ರಸ್ತುತವಾಗಿ ಅವುಗಳು ಕಣ್ಮರೆಯಾಗಿರುವುದು ಇಲ್ಲಿ ಜೈನಧರ್ಮ ಸಂಪೂರ್ಣ ಅವನತಿ ಹೊಂದಿದ ಅಂಶವನ್ನು ತಿಳಿಯಬೇಕಾಗುತ್ತದೆ. ಶೈವಧರ್ಮದ ಪ್ರಭಾವ ಹೆಚ್ಚಾಗಿದ್ದರೂ ಆ ನಂತರ ಹೊಯ್ಸಳರ, ವಿಜಯನಗರದ ಅರಸರ ಕಾಲದಲ್ಲಿ ವೈಷ್ಣವ ಧರ್ಮವು ಹೆಚ್ಚು ಅಭಿವೃದ್ಧಿ ಹೊಂದಿರುವುದನ್ನು ಇದರ ಅಧ್ಯಯನದ ಮೂಲಕ ತಿಳಿಯಲಾಗಿದೆ. ಇವುಗಳ ಅಧ್ಯಯನದ ಮೂಲಕ ಚಾರಿತ್ರಿಕ ಹಿನ್ನೆಲೆಯನ್ನು ವಿಶ್ಲೇಷಿಸಲಾಗಿದೆ.

ಕಣಕಟ್ಟೆಯು ಶಾಸನ ಸಂಪತ್ತಿನಿಂದ ಕೂಡಿದ ಗ್ರಾಮ ಎಂದೇ ಹೆಸರು ವಾಸಿಯಾಗಿದೆ. ಈ ಪ್ರದೇಶದಲ್ಲಿ ಹೆಚ್ಚು ಶಾಸನಗಳು ಲಭ್ಯವಾಗಿದ್ದು ಇವುಗಳು ಇಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ರಚಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ಈ ಪ್ರದೇಶದಲ್ಲಿ ದಾನಶಾಸನಗಳು ಹೆಚ್ಚಾಗಿದ್ದರೂ,

ವೀರಗಲ್ಲುಗಳು ಸಹ ಅತ್ಯಧಿಕ ಪ್ರಮಾಣದಲ್ಲಿಯೇ ಲಭ್ಯವಿದೆ. ದಾನ ಶಾಸನಗಳಲ್ಲಿ ಕೆಲವನ್ನು ವಿಶ್ಲೇಷಿಸಲಾಗಿದೆ. ಅವುಗಳು ಒಳಗೊಂಡಿರುವ ಅಂಶಗಳ ಮೂಲಕ ಇಲ್ಲಿನ ಇತಿಹಾಸವನ್ನು ತಿಳಿಯಲಾಗಿದೆ. ಶಾಸನಗಳ ಪ್ರಕಾರಗಳಾದ ವೀರಗಲ್ಲು, ಮಾಸ್ತಿಕಲ್ಲು, ನಿಷದಿಕಲ್ಲುಗಳು ಲಭ್ಯವಿದ್ದು, ಅವುಗಳ ಮೂಲಕ ಈ ಪ್ರದೇಶದ ಧಾರ್ಮಿಕತೆ, ಸಾಮಾಜಿಕತೆಯನ್ನು ತಿಳಿಯಲಾಗಿದೆ. ಧಾರ್ಮಿಕ ನೆಲೆಗಟ್ಟು ವೀರತ್ವದ ಪ್ರತಿಬಿಂಬ ಮತ್ತು ಸ್ತ್ರೀಯರ ಹೋರಾಟದ ಪ್ರತಿಬಿಂಬವನ್ನು ನೀಡಲಾಗಿದೆ. ಅಲ್ಲದೆ ಈ ಪ್ರದೇಶದ ರಾಜರು, ಸಾಮಂತರು, ಮಹಾಮಂಡಳೇಶ್ವರರು, ಮುಂತಾದವರ ಕುರಿತು ವಿವರಣೆಯನ್ನು ಈ ಶಾಸನಗಳು ನೀಡುವುದರಿಂದ ಈ ಪ್ರದೇಶದ ಸಾಂಸ್ಕೃತಿಕತೆಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಕಣಕಟ್ಟೆ ಪರಿಸರದಲ್ಲಿನ ಸಮಾಜ ಮತ್ತು ವ್ಯವಸ್ಥೆಯನ್ನು ಗಮನಿಸಿದಾಗ ಇಲ್ಲಿ ವರ್ಣಪದ್ಧತಿ, ಅಸ್ತಿತ್ವದಲ್ಲಿದ್ದುದನ್ನು ತಿಳಿಯಬಹುದಾಗಿದೆ. ಇದರಲ್ಲಿ ಜನರ ಜೀವನ, ಬದುಕು ಸಮಾಜದ ಮೂಲ ಘಟಕವಾದ ಕೌಟುಂಬಿಕ ವ್ಯವಸ್ಥೆ, ಅದರಲ್ಲಿ ಮಹಿಳೆಯರ ಸ್ಥಾನಮಾನವನ್ನು ಸ್ಪಷ್ಟಪಡಿಸಲಾಗಿದೆ. ಹಲಕೂರಿನ ಒಂದು ಶಾಸನ ಊರಿನ ಗೌಡಿಕೆಯನ್ನು ಸ್ತ್ರೀಗೆ ನೀಡಿರುವ ಅಂಶವನ್ನು ಸ್ಪಷ್ಟಪಡಿಸುತ್ತದೆ. ಇದನ್ನು ಗಮನಿಸಿದಾಗ ಅಲ್ಪಪ್ರಮಾಣದಲ್ಲಿಯಾದರೂ ಸ್ತ್ರೀಗೆ ಕೆಲವು ಅಧಿಕಾರಗಳು ಪುರುಷನಿಂದ ಹಸ್ತಾಂತರಿಸಲ್ಪಟ್ಟಿದ್ದವು ಎನ್ನುವುದನ್ನು ತಿಳಿಯಬಹುದು. ಹಾಗೆಯೇ ಈ ಪರಿಸರದಲ್ಲಿ ಮೊದಮೊದಲು ಧಾರ್ಮಿಕ ಸಂಘರ್ಷಗಳು ಘಟಿಸಿದ್ದರೂ ನಂತರದಲ್ಲಿ ಧಾರ್ಮಿಕ ಸಹಿಷ್ಣುತೆಯನ್ನು ಮೈಗೂಡಿಸಿಕೊಂಡಿರುವುದು ಕಂಡುಬರುತ್ತದೆ. ಶೈವ ವೈಷ್ಣವ ಧರ್ಮಗಳು ಹೆಚ್ಚು ಪ್ರಾಬಲ್ಯವನ್ನು ಹೊಂದಿದ್ದವು. ಅದರಲ್ಲಿಯೂ ಶೈವ ಧರ್ಮವು ಹೆಚ್ಚು, ಪ್ರಬಲವಾಗಿತ್ತು ಮತ್ತು ಈಗಲೂ ಅದೇ ಪ್ರಾಬಲ್ಯವನ್ನು ಹೊಂದಿದೆ ಎನ್ನುವುದಕ್ಕೆ ಇಲ್ಲಿ ಸಿಕ್ಕಿರುವ ಶೈವ ಸಂಬಂಧಿ ದೇವಾಲಯಗಳೇ ಸಾಕ್ಷಿಗಳಾಗಿವೆ. ಇದರ ವಿವರ ವಾದ ಮಾಹಿತಿಯನ್ನು ನೀಡಲಾಗಿದೆ. ಹಾಗೇಯೇ ಒಂದು ಪ್ರದೇಶದ ಅಭಿವೃದ್ಧಿಯನ್ನು ಅಲ್ಲಿನ ಆರ್ಥಿಕ ಚಟುವಟಿಕೆಗಳ ಮೂಲಕ ನಿರ್ಧರಿಸಬಹುದಾಗಿದ್ದು. ಕಣಕಟ್ಟೆಯು ಪ್ರಮುಖವಾದ ವ್ಯಾಪಾರಿ ಕೇಂದ್ರವಾಗಿತ್ತು ಎಂಬುದನ್ನು ಶಾಸನಗಳು ವಿಶದಪಡಿಸುತ್ತವೆ. ಇಲ್ಲಿ ಆರ್ಥಿಕ ವ್ಯವಸ್ಥೆಯ ಮೂಲವಾಗಿರುವ ಕೃಷಿ, ನೀರಾವರಿ ವ್ಯಾಪಾರ, ವಾಣಿಜ್ಯಕ್ಕೆ ಸಂಬಂಧಿಸಿದಂತೆ ವಿಶ್ಲೇಷಿಸಲಾಗಿದೆ.

ಒಂದು ಸಮಾಜದ ಅಸ್ತಿತ್ವದಲ್ಲಿ ಅಲ್ಲಿನ ನಂಬಿಕೆಗಳು ಆಚರಣೆಗಳು ಆ ಸಮಾಜದ ಜೀವಾಳವಾಗಿವೆ. ಮಾನವನ ಜೀವನದಲ್ಲಿ ಇವುಗಳು ಹಾಸುಹೊಕ್ಕಾಗಿದ್ದು, ಸಂಸ್ಕೃತಿಯ ಬೆಳಕನ್ನು ಬೀರಿ ಸಂಸ್ಕೃತಿಗೆ ಸಂಬಂಧಿಸಿದ ಮೌಖಿಕ ಪುರಾವೆಗಳನ್ನು ಒದಗಿಸುವಲ್ಲಿ ಪ್ರಮುಖವಾಗಿವೆ. ಜಾತ್ರೆಗಳು, ಉತ್ಸವಗಳು, ಹಬ್ಬಗಳು, ಐತಿಹ್ಯಗಳು, ಇವುಗಳೆಲ್ಲವನ್ನು ಆಚರಿಸುವಲ್ಲಿ ಜನರು

ಹಿಂದಿನಿಂದಲೂ ನಂಬಿಕೊಂಡು ಬಂದಿರುವ ನಂಬಿಕೆಗಳು ಆ ಮೂಲಕ ಸಮಾಜಕ್ಕೆ ಒಳಿತಾಗುತ್ತದೆನ್ನುವ ನಂಬಿಕೆಗಳೇ ಆ ಪರಿಸರದಲ್ಲಿನ ಸಂಸ್ಕೃತಿಯನ್ನು ತಿಳಿಸಿಕೊಡುತ್ತದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ನಂಬಿಕೆ ಆಚರಣೆಗಳಡಿಯಲ್ಲಿ ಜಾತ್ರೆ, ಹಬ್ಬ, ಉತ್ಸವ ಮುಂತಾದವುಗಳನ್ನು ಆಚರಿಸುತ್ತಾರೆ. ಅವುಗಳಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯಕೈಗೊಂಡು ಅಧ್ಯಯನ ನಡೆಸಿ ಅವುಗಳನ್ನು ವಿಶ್ಲೇಷಿಸಲಾಗಿದೆ.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಹಲವಾರು ಫಲಿತಗಳು ಅಧ್ಯಯನ ಸಂದರ್ಭದಲ್ಲಿ ಕಂಡುಬಂದವು. ಇಲ್ಲಿನ ಶಾಸನಗಳು, ದೇವಾಲಯಗಳನ್ನು ಸಮಗ್ರ ಅಧ್ಯಯನಕ್ಕೆ ಒಳಪಡಿಸಲಾಯಿತು. ಅಧ್ಯಯನದ ಮುಖ್ಯ ಉದ್ದೇಶವೆಂದರೆ ಕಣಕಟ್ಟೆ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನವಾಗಿದ್ದು ಈ ಪರಿಸರದ ಸಾಂಸ್ಕೃತಿಕ ಮಹತ್ವವನ್ನು ಮರೆತು ಹೋಗಿರುವ ಚಾರಿತ್ರಿಕ ವಿಷಯಗಳನ್ನು ಪುನರ್ ಪರಿಶೀಲಿಸಿ, ಈ ಪ್ರದೇಶದ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಹಾಗೂ ಸ್ಥಳೀಯ ಚರಿತ್ರೆಯ ಮಹತ್ವವನ್ನು ತಿಳಿಸಲು ಈ ಸಂಪ್ರಬಂಧದ ರಚನೆಯಲ್ಲಿ ಪ್ರಯತ್ನ ಮಾಡಲಾಗಿದೆ.

ಈ ಮೇಲ್ಕಾಣಿಸಿದ ಸಂಗತಿಗಳೊಡನೆ ಹೇಳಬೇಕಾದ ಮತ್ತೊಂದು ಅಂಶವೆಂದರೆ ಸಾಂಸ್ಕೃತಿಕವಾಗಿ ಕಣಕಟ್ಟೆ ಹೋಬಳಿ ಮಹತ್ವದ ಸ್ಥಾನವನ್ನು ಹೊಂದಿದೆ. ಆದರೆ ಇಲ್ಲಿನ ಪ್ರಾಚೀನ ದೇವಾಲಯಗಳು ನಶಿಸಿ ಹೋಗುತ್ತಿವೆ. ಶಾಸನಗಳು ಮಣ್ಣಿನಲ್ಲಿ ಹೂತುಹೋಗುತ್ತಿವೆ. ಇವುಗಳ ಬಗ್ಗೆ ಜಾಗೃತಿ ಮೂಡಿಸುವ ಮತ್ತು ದೇವಾಲಯಗಳ ಜೀರ್ಣೋದ್ಧಾರ ಕಾರ್ಯ ತ್ವರಿತವಾಗಿ ನಡೆಯಬೇಕಾಗಿದೆ. ಮತ್ತು ಇದರ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಬೇಕಾಗುತ್ತದೆ. ಮತ್ತು ಇಲ್ಲಿ ಹೇರಳವಾಗಿ ಲಭ್ಯವಾಗಿರುವ ಮೌಖಿಕ ಕಥನಗಳು, ಐತಿಹ್ಯಗಳು, ಆಚರಣೆಗಳ ಕುರಿತು ಇನ್ನೂ ಹೆಚ್ಚಿನ ಅಧ್ಯಯನದ ಅವಶ್ಯಕತೆಯಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಕಣಕಟ್ಟೆ ಹೋಬಳಿಯು ಸಾಂಸ್ಕೃತಿಕವಾಗಿ ಮಹತ್ವವನ್ನು ಹೊಂದಿದ ಪ್ರದೇಶವಾಗಿದೆ. ನನ್ನ ಅಧ್ಯಯನದಲ್ಲಿ ಕಂಡುಕೊಂಡ ವಿಶೇಷತೆಗಳೆಂದರೆ ಪ್ರಮುಖವಾಗಿ ಕಣಕಟ್ಟೆ ಹೋಬಳಿಯಲ್ಲಿ ಹೆಚ್ಚಿನ ಪ್ರಮಾಣದ ಸ್ಮಾರಕಶಿಲ್ಪಗಳು ಸಿಕ್ಕಿದೆ. ವೀರಗಲ್ಲುಗಳು ಹೆಚ್ಚಿನ ಪ್ರಮಾಣದಲ್ಲಿ ದೊರಕಿವೆ. ಇವುಗಳನ್ನು ಗಮನಿಸಿದಾಗ ಅಂದಿನ ಸಮಾಜ ಮತ್ತು ರಾಜ್ಯವ್ಯವಸ್ಥೆ ಯುದ್ಧಕ್ಕೆ ಮತ್ತು ವೀರನಿಗೆ ಎಷ್ಟು ಪ್ರಾಮುಖ್ಯತೆ ನೀಡಿತ್ತು ಎನ್ನುವುದನ್ನು ತಿಳಿಯಬಹುದು. ಹಾಗೆಯೇ ಶಾಸನಗಳಲ್ಲಿ ತೆಲ್ಲಿಗರ ಕುರಿತು ವಿವರಣೆಗಳು ಹೆಚ್ಚಾಗಿ ಕಂಡುಬರುವುದರಿಂದ ಹಿಂದಿನಿಂದಲೂ ಮತ್ತು ಪ್ರಸ್ತುತವಾಗಿಯೂ ಇಲ್ಲಿ ತೈಲದ ವ್ಯಾಪಾರವು ಪ್ರಮುಖವಾಗಿದ್ದು, ಅದಕ್ಕಾಗಿ ಪ್ರಸಿದ್ಧಿಯನ್ನು ಪಡೆದಿದೆ.

ಹಾಗೆಯೇ ಈ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆಗಳನ್ನು ಕೈಗೊಂಡರೆ ಇಲ್ಲಿ ಹೊಸ ಹೊಸ ನೆಲೆಗಳು ಶೋಧಗೊಂಡು ಪ್ರಾಗಿತಿಹಾಸ ಕಾಲದಲ್ಲಿ ಈ ಪ್ರದೇಶದಲ್ಲಿ ಮಾನವನ ಕಾರ್ಯಚಟುವಟಿಕಗಳು ಹೇಗಿದ್ದವು ಎನ್ನುವುದನ್ನು ಅರಿಯಲು ಸಹಾಯಕವಾಗುತ್ತದೆ. ಆ ಮೂಲಕ ಈ ಪ್ರದೇಶದಲ್ಲಿನ ಪ್ರಾಚೀನ ಮಾನವನ ಇತಿಹಾಸವನ್ನು ರಚಿಸಲು ಸಹಕಾರಿಯಾಗುತ್ತದೆ. ಈ ನಿಟ್ಟಿನಲ್ಲಿ ಸಂಶೋಧನೆಗಳು ಅಧ್ಯಯನಗಳು, ಉತ್ಖನನಗಳು ತ್ವರಿತಗತಿಯಲ್ಲಿ ನಡೆಯಬೇಕಾಗಿದೆ.

# ಅನುಬಂಧಗಳು

೧. ಗ್ರಂಥಋಣ

೨. ವಕ್ತೃಗಳ ವಿವರ

೩. ನಕ್ಷೆಗಳು

೪. ತಲನಕ್ಷೆಗಳು

೫. ಛಾಯಾಚಿತ್ರಗಳು

ಅನುಬಂಧ ಒಂದು

# ಗ್ರಂಥಋಣ


೧. ಅಪರ್ಣ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨. **ಕನ್ನಡ ರತ್ನಕೋಶ(ಪರಿಷ್ಕೃತ),** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧

೩. **ಕರ್ನಾಟಕ ರಾಜ್ಯ ಗೈಸೆಟಿಯರ್, ಭಾಗ ೧,** ದಶವಾರ್ಷಿಕ ಪುರವಣಿ, ೧೯೮೩-೯೩

೪. **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಸಂಪುಟ ೧,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೫

೫. ಕಲಬುರ್ಗಿ ಎಂ.ಎಂ., **ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೦

೬. ಕೃಷ್ಣಕುಮಾರ್ ಸಿ.ಪಿ., **ಶಾಸನಶಾಸ್ತ್ರ,** ಚೇತನ ಬುಕ್ ಹೌಸ್, ಮೈಸೂರು, ೨೦೧೧

೭. ಗೋಪಾಲ್ ಆರ್(ಸಂ), **ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೧೦

೮. ಗೋಪಾಲ ಬಾ.ರಾ., **ಕರ್ನಾಟಕ ಮೂರ್ತಿಶಿಲ್ಪ,** ಅವಲೋಕನ ಪ್ರಿಂಟರ್ಸ್, ಬೆಂಗಳೂರು, ೧೯೮೫

೯. ಗುರುಮೂರ್ತಿ ಕೆ.ಜಿ., **ಜನಪದ ಸಮಾಜ ಮತ್ತು ಸಂಸ್ಕೃತಿ,** ಪಠ್ಯಪುಸ್ತಕ ನಿರ್ದೇಶನಾಲಯ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೧೦. ಗೊರೂರು ಅನಂತರಾಜು, **ಹಾಸನ ಜಿಲ್ಲೆಯ ದೇವಾಲಯ ದರ್ಶನ,** ಪದ್ಮಶೇಖರ್ ಪ್ರಿಂಟರ್ಸ್, ಮೈಸೂರು, ೨೦೦೯

೧೧. ಜ್ಞಾನಾನಂದ ಜಿ., **ಶಿಲ್ಪಾದರ್ಶ, ಸಂಪುಟ ೨,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೨. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನಬುಕ್ ಹೌಸ್, ಬೆಂಗಳೂರು, ೧೯೬೬

೧೩. ಚಿದಾನಂದಮೂರ್ತಿ ಎಂ., ಜನ–ಜನಪದ–ಜಾನಪದ, ಸಪ್ನಬುಕ್ ಹೌಸ್, ಬೆಂಗಳೂರು, ೨೦೦೨

೧೪. ಜವರೇಗೌಡ ದೇ., **ಜಾನಪದ ಅಧ್ಯಯನ,** ಚೇತನಬುಕ್ ಹೌಸ್, ಮೈಸೂರು, ೨೦೦೧

೧೫. ತಿಪ್ಪೇರುದ್ರಸ್ವಾಮಿ ಹೆಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ವಾಣಿ ಪ್ರಕಾಶನ, ಚಾಮರಾಜಪುರಂ, ಮೈಸೂರು, ೧೯೯೨

೧೬. ನರಸಿಂಹಮೂರ್ತಿ ಹೆಚ್.ಪಿ., **ನಮ್ಮ ಹಬ್ಬಗಳು,** ವಿಕಾಸ ಪ್ರಕಾಶನ, ಉಡುಪಿ, ೨೦೦೨

೧೭. ನರಸಿಂಹಮೂರ್ತಿ ಎ.ವಿ.(ಸಂ), **ಎಪಿಗ್ರಾಫಿಯ ಕರ್ನಾಟಿಕ(ಪರಿಷ್ಕೃತ), ಸಂಪುಟ ೧೦,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೭

೧೮. ಪರಮಶಿವಮೂರ್ತಿ ಡಿ.ವಿ., **ಕನ್ನಡ ಶಾಸನಶಿಲ್ಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೯. ಪುಟ್ಟಸ್ವಾಮಿ ಬಿ.ಎಸ್., **ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ,** ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು, ೨೦೦೭

೨೦. ಪ್ರಭಾಕರ ಎಂ.ಎಸ್., **ದೇವಾಲಯ ವಾಸ್ತುಚಂದ್ರಿಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೧. ಪ್ರಭಾಕರ ಎಂ.ಎಸ್., **ದೇವಾಲಯ ವಾಸ್ತು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೨೨. ಭಗವತಿ ಎಸ್.ಎಸ್., ಮೇಲಿನಮನಿ ಎಚ್.ಎಸ್., **ಕನ್ನಡ ಶಾಸನಗಳ ಅಧ್ಯಯನ,** ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪

೨೩. ಭಟ್‌ಸೂರಿ ಕೆ.ಜಿ.(ಸಂ), **ಕರ್ನಾಟಕ ಶಾಸನ ಸಂಶೋಧನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೨೪. ಭಟ್ ವಿ.ಎನ್., **ಭಾರತೀಯ ಹಬ್ಬಗಳ ವೈಶಿಷ್ಟ್ಯ**, ವಿಶ್ವನಾಥ ಪ್ರಕಾಶನ, ಶಿವಮೊಗ್ಗ, ೨೦೦೭

೨೫. ಮಂಜುನಾಥ ಬೇವಿನಕಟ್ಟಿ, **ಕನ್ನಡ ಜನಪದ ನಂಬಿಕೆಗಳು**, ಜ್ಯೋತಿ ಪ್ರಕಾಶನ, ಮೈಸೂರು, ೨೦೦೭

೨೬. ಮೂರ್ತಿ ಕೆ.ಎಲ್.ಎನ್., **ಕರ್ನಾಟಕದ ಕಲೆ ವಾಸ್ತುಶಿಲ್ಪ**, ರಂಜಿತ ಪ್ರಕಾಶನ, ಬೆಂಗಳೂರು, ೧೯೯೮

೨೭. ರಘೋತ್ತಮ ತೀರ್ಥ, **ಪ್ರವಾಸಿ ಕರ್ನಾಟಕ ದರ್ಶನ**, ಭಾರತೀಭಾಯಿ ಪ್ರಕಾಶನ, ಬೆಂಗಳೂರು, ೨೦೦೯

೨೮. ರಹಮತ್ ತರೀಕೆರೆ, **ಸಾಂಸ್ಕೃತಿಕ ಅಧ್ಯಯನ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮

೨೯. ರಾಜಾರಾಂ ಹೆಗಡೆ, *ಭಾರತೀಯ ಮೂರ್ತಿಶಾಸ್ತ್ರ, ಧರ್ಮ ದೇವತಾರಾಧನೆ ಹಾಗೂ ಸಾಂಸ್ಕೃತಿಕ ರಾಜಕೀಯ ಐತಿಹಾಸಿಕ ವಿಶ್ಲೇಷಣೆ*, **ಅರಿವು ಬರಹ, ಸಂ.೨, ಭಾಗ ೧,** ಬಿ.ಆರ್.ಪ್ರಾಜೆಕ್ಟ್, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ, ೧೯೯೨

೩೦. ರಾಮಚಂದ್ರರಾವ್ ಎಸ್.ಕೆ., **ಮೂರ್ತಿಶಿಲ್ಪ: ನೆಲೆ ಹಿನ್ನೆಲೆ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫

೩೧. ಲಲಿತಾಂಬ ಎನ್.ಆರ್., **ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ**, ಪೂರ್ಣಿಮಾ ಪ್ರಕಾಶನ, ಬೆಂಗಳೂರು, ೨೦೧೧

೩೨. ಲಿಂಗಣ್ಣ ಚಿ.ಸಿ., **ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಕೋಶ**, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೦೪

೩೩. ಲಕ್ಷ್ಮಣ್ ತೆಲಗಾವಿ(ಸಂ), **ಸ್ಥಳೀಯ ಚರಿತ್ರೆ, ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೩೪. ಲಕ್ಷ್ಮಣ್ ತೆಲಗಾವಿ, **ಮೌರ್ಯ ಮತ್ತು ಶಾತವಾಹನ ಯುಗ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೩೫. ವಸು ಎಂ.ವಿ., **ದಕ್ಷಿಣ ಕರ್ನಾಟಕದ ಅರಸುಮನೆತನಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೩೬. ವಸಂತಲಕ್ಷ್ಮೀ ಕೆ., **ಹಾಸನ ಜಿಲ್ಲೆಯ ಹೊಯ್ಸಳ ಬಸದಿಗಳು**, ಸುಮುಖ ಪ್ರಕಾಶನ, ಬೆಂಗಳೂರು, ೨೦೦೬

೩೭. ವಾಸುದೇವನ್ ಸಿ.ಎಸ್., **ಕರ್ನಾಟಕ ದೇವಾಲಯ ಕೋಶ: ರಾಯಚೂರು ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

೩೮. ಶಿವಕುಮಾರಸ್ವಾಮಿ ಸಿ.ಎನ್., **ಕರ್ನಾಟಕದ ಜಾತ್ರೆಗಳು**, ಬಿ.ಆರ್.ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೮

೩೯. ಶಿವತಾರಕ ಕೆ.ಬಿ., **ಕರ್ನಾಟಕದ ಪುರಾತತ್ವ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೪೦. ಶೇಷಶಾಸ್ತ್ರಿ ಆರ್., **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

೪೧. ಶ್ರೀಕಂಠಶಾಸ್ತ್ರಿ ಎಸ್., **ಭಾರತೀಯ ಸಂಸ್ಕೃತಿ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೪೨. ಶ್ರೀನಿವಾಸ ಪಾಡಿಗಾರ, **ಭಾರತೀಯ ಇತಿಹಾಸದ ಶಾಸನ ಆಕರಗಳು**, ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ, ೨೦೦೪

೪೩. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು**, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೯

೪೪. ಸೂರ್ಯನಾಥ ಕಾಮತ್(ಸಂ), **ಇತಿಹಾಸ ದರ್ಶನ, ಸಂಪುಟ ೧ರಿಂದ ೨೭**, ಇತಿಹಾಸ ಅಕಾಡೆಮಿ, ಬೆಂಗಳೂರು, ೨೦೧೨

೪೫. ಸುರೇಶ್ ಕೆ.ಎಂ., ವಾಸುದೇವ ಬಡಿಗೇರ, ಸೋಮಶೇಖರ ಎಸ್.ವೈ., ಮಾಡಲಗೇರಿ ಕೊಟ್ರೇಶ್, **ಕರ್ನಾಟಕ ದೇವಾಲಯ ಕೋಶ:ಕೊಪ್ಪಳ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

**ಅಪ್ರಕಟಿತ ಸಂಶೋಧನಾ ಪ್ರಬಂಧಗಳು**

೧. ದಾಸಪ್ಪ ಎನ್., **ಕೋರ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ**(ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨. ನಾಗರಾಜಪ್ಪ ಎನ್., **ಚಿತ್ರದುರ್ಗ ಪರಿಸರದ ದೇವಾಲಯಗಳು**(ಅಪ್ರಕಟಿತ ಎಂ.ಫಿಲ್. ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೩. ಶ್ರೀನಿವಾಸ ಎ.ಜೆ., **ನಿಟ್ಟೂರು ಹೋಬಳಿ: ಸಾಂಸ್ಕೃತಿಕ ಅಧ್ಯಯನ**(ಅಪ್ರಕಟಿತ ಎಂ.ಫಿಲ್.ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

**English Books**

1. **Census of India,** 2001, Karntaka State, Hassan District
2. Desai P.B. and Ritti., History of Karnataka, Dharwad, 1970
3. **Mysore State Hassan District Gazetter of India**, The Director of Printing Stationery & Publications at the Government Press, Bangalore, 1971
4. Narsimhamurthy A.V., **Coins & Currency system in Karnataka,** Directarate of Archaeology and Museum, Mysore, 1996
5. Shivarudraswamy S.N., **Vijayanagar Temple's in Karnataka,** Directarate of Archaeology and Museum, Mysore, 1996
6. Sundara Rajan K.V., **Art of South India, Deccan,** Sundep Prakashana, Delhi, 1980
7. Wilson H.H., **Hindu Religions,** Bharatiya Book Corporation, Delhi, 1977

## ಅನುಬಂಧ ಎರಡು

# ವಕ್ತೃಗಳ ವಿವರ

| ಕ್ರಸಂ. | ಹೆಸರು | ವಯಸ್ಸು | ವೃತ್ತಿ | ಗ್ರಾಮ |
|---|---|---|---|---|
| ೧ | ಸತೀಶ್ | ೩೯ | ವ್ಯಾಪಾರಿ | ಕಣಕಟ್ಟೆ |
| ೨. | ಸಿದ್ದಪ್ಪ | ೫೫ | ವ್ಯವಸಾಯ | ಶಶಿವಾಳ |
| ೩ | ರಾಜಪ್ಪ | ೬೦ | ಅರ್ಚಕರು | ಸೋಮಶೆಟ್ಟಿಹಳ್ಳಿ |
| ೪. | ಈಶ್ವರಪ್ಪ | ೫೭ | ಅರ್ಚಕರು | ಹೊಳಲ್ಕೆರೆ |
| ೫. | ರಂಗನಾಥ್ | ೪೦ | ಅರ್ಚಕರು | ಚಿಕ್ಕಹಲಕೂರು |
| ೬. | ಸ್ವಾಮಿ | ೪೫ | ಶಿಕ್ಷಕರು | ದೊಡ್ಡಮೇಟಿಕುರ್ಕೆ |
| ೭ | ಗಿರೀಶ್ | ೩೦ | ವಿದ್ಯಾರ್ಥಿ | ದೊಡ್ಡಮೇಟಿಕುರ್ಕೆ |
| ೮ | ಮುದ್ದೇಗೌಡರು | ೬೫ | ಅರ್ಚಕರು | ಮಾಡಾಳು |
| ೯. | ಗಂಗಾಧರ | ೪೨ | ಅರ್ಚಕರು | ಮೇಳೇನಹಳ್ಳಿ |
| ೧೦. | ಯೋಗೀಶ್ವರಪ್ಪ | ೩೫ | ವ್ಯವಸಾಯ | ಜನ್ನಾವರ |
| ೧೧. | ರಂಗಪ್ಪ | ೭೫ | ವ್ಯವಸಾಯ | ಚಿಕ್ಕಮೇಟಿಕುರ್ಕೆ |
| ೧೨. | ನರಸಿಂಹಮೂರ್ತಿ | ೫೦ | ವ್ಯವಸಾಯ | ಕಿತ್ತನಕೆರೆ |
| ೧೩. | ಕೋಟ್ರೇಶಪ್ಪ | ೬೦ | ಅರ್ಚಕರು | ಹಿರೇಸಾಗರಹಳ್ಳಿ |
| ೧೪. | ತಿಮ್ಮಪ್ಪ | ೭೦ | ವ್ಯವಸಾಯ | ರಾಂಪುರ |

| | | | | |
|---|---|---|---|---|
| ೧೫. | ಕೊಂಡ್ಲಯ್ಯ | ೫೫ | ವ್ಯವಸಾಯ | ದೊಡ್ಡಮೇಟಿಕುರ್ಕೆ |
| ೧೬. | ಕೃಷ್ಣಪ್ಪ | ೫೫ | ವ್ಯವಸಾಯ | ಸಾತಂಗೆರೆ |
| ೧೭. | ಮಲ್ಲಪ್ಪ | ೪೮ | ಅರ್ಚಕರು | ಕಲ್ಲುಗುಂಡಿ |
| ೧೮. | ಮಂಜುಳಾ | ೩೮ | ಗೃಹಿಣಿ | ಕಣಕಟ್ಟೆ |
| ೧೯. | ದಾಸಪ್ಪ | ೬೨ | ವ್ಯಾಪಾರಿ | ಹೊನ್ನಕಟ್ಟ |
| ೨೦ | ಶ್ರೀಕಂತಪ್ಪ | ೫೩ | ಶಿಕ್ಷಕರು | ಕರಡಿಹಳ್ಳಿ |

## ಅನುಬಂಧ ಮೂರು

## ನಕ್ಷೆಗಳು

### ಹಾಸನ ಜಿಲ್ಲೆಯ ನಕ್ಷೆ



# ಕಣಕಟ್ಟೆ ಹೋಬಳಿ ನಕ್ಷೆ




1. ಕಣಕಟ್ಟೆ
2. ಕಸವನಹಳ್ಳಿ
3. ಕೆರೆಮುಂದಿನ ಕಾವಲು
4. ದಿಬ್ಬೂರು
5. ಯಚಗೊಂಡನಹಳ್ಳಿ
6. ಹಂಪನಕಟ್ಟೆ
7. ದೋಣನಕಟ್ಟೆ
8. ಬೊಮ್ಮಸಮ್ಮುದ್ರ
9. ಕುಂಬಾರಘಟ್ಟ
10. ಕಿತ್ತನೆಕೆರೆ
11. ಕಡ್ಲೆಮಗ್ಗೆ
12. ಹೊಸಹಳ್ಳಿ
13. ಬೆಣ್ಣೆಗೊಂಡನಹಳ್ಳಿ
14. ಕೆ.ಶಂಕರನಹಳ್ಳಿ
15. ಮದ್ದರಹಳ್ಳಿ
16. ಬಟ್ಟಿಹಳ್ಳಿ
17. ಕರಡಿಹಳ್ಳಿ
18. ಗಿರಿಬೊಮ್ಮಹಳ್ಳಿ
19. ಸೋಮಶೆಟ್ಟಿಹಳ್ಳಿ
20. ಅಹಮದ್‌ಪುರ
21. ಕಲ್ಲುಸಾಗರಹಳ್ಳಿ
22. ಜಿ.ಶಂಕರನಹಳ್ಳಿ
23. ಹಳ್ಳಿತಿಮ್ಮನಹಳ್ಳಿ
24. ಬೈರಾಪುರ
25. ಕಲ್ಗುಂಡಿ
26. ಗೊಲ್ಲರಹಳ್ಳಿ
27. ನರಸೀಪುರ
28. ಮಾಗೇನಹಳ್ಳಿ
29. ಸಾತನಗೆರೆ
30. ಹೊನ್ನಕಟ್ಟ
31. ಹಿರೇಸಾದರಹಳ್ಳಿ
32. ಚಿಕ್ಕನಂದಿಹಳ್ಳಿ
33. ಸೊಪ್ಪಿನಹಳ್ಳಿ
34. ಮಾಡಾಳು
35. ದೊಡ್ಡಮೇಟಿಕುರ್ಕೆ
36. ಯರೇಹಳ್ಳಿ
37. ಚಿಕ್ಕಮೇಟಿ ಕುರ್ಕೆ
38. ಹರಳಕಟ್ಟ
39. ಕ್ಯಾತನಹಳ್ಳಿ
40. ಶಶಿವಾಳ
41. ಹೊಳಲ್ಕೆರೆ
42. ರಾಂಪುರ
43. ಕುರುಬರಹಳ್ಳಿ
44. ಬಸವನಹಳ್ಳಿ
45. ಮಲ್ಲೇನಹಳ್ಳಿ
46. ಗೊಲ್ಲರಹಳ್ಳಿ
47. ಯರೇಗೆನಹಳ್ಳಿ
48. ತುಡಿಕೆನಹಳ್ಳಿ
49. ಸಿಂಗೇನಹಳ್ಳಿ
50. ಜೆ.ಸಿ.ಪುರ
51. ಕಸವನಹಳ್ಳಿ
52. ತುಂಬಾಪುರ
53. ಕರಡಿಹಳ್ಳಿ
54. ಕಾಮಸಮುದ್ರ
55. ಪಡುವನಹಳ್ಳಿ
56. ರಾಮನಹಳ್ಳಿ
57. ಚಿಕ್ಕಹಲಕೂರು
58. ಭೈರಾಪುರ
59. ಮಲ್ಲಾಪುರ
60. ನಾಗವೇದಿ
61. ದೊಡ್ಡಘಟ್ಟ
62. ಜನ್ನಾಪುರ
63. ಹಿರೇಕಲ್ಲು ಫಾರೆಸ್ಟ್
64. ವಾಲೇಹಳ್ಳಿ

# ಅರಸೀಕೆರೆ ತಾಲ್ಲೂಕು ನಕ್ಷೆ



## ಅನುಬಂಧ ನಾಲ್ಕು

## ತಲನಕ್ಷೆಗಳು

### ಬಿಳಿಕಲ್ಲು ರಂಗನಾಥಸ್ವಾಮಿ ದೇವಾಲಯ, ಚಿಕ್ಕಹಲಕೂರು



## ಅನುಬಂಧ ಐದು

## ಛಾಯಾಚಿತ್ರಗಳು



ತ್ರಿಕೂಟ ದೇವಾಲಯ, ಕಲ್ಲುಗುಂಡಿ



ಕಮಟೇಶ್ವರ ದೇವಾಲಯದ ಹೊರಭಾಗ, ಕಣಕಟ್ಟೆ



ಸಿಂಗನಾಥೇಶ್ವರ ದೇವಾಲಯ
ಕಣಕಟ್ಟೆ



ಸೋಮೇಶ್ವರ ದೇವಾಲಯ
ಪಾರ್ಶ್ವನೋಟ, ಜನ್ನಾವರ



ಶ್ರೀ ಕಲ್ಲೇಶ್ವರಸ್ವಾಮಿ
ದೇವಾಲಯ, ಪಾರ್ಶ್ವನೋಟ,
ಕಣಕಟ್ಟೆ



ಕಮಟೇಶ್ವರ ದೇವಾಲಯದ
ಪಾರ್ಶ್ವನೋಟ, ಕಣಕಟ್ಟೆ



ಶ್ರೀ ಭೈರೇದೇವರ ಗುಡಿ,
ಕಣಕಟ್ಟೆ



ನೂರ ಎಂಟು ಶಿವಲಿಂಗಗಳು,
ಶಶಿವಾಳ



ಶ್ರೀ ಲಕ್ಷ್ಮೀನರಸಿಂಹಸ್ವಾಮಿ, ಕಿತ್ತನಕೆರೆ



ಶ್ರೀ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ, ಕಿತ್ತನಕೆರೆ



ಸೋಮೇಶ್ವರ ದೇವಾಲಯ ಜನ್ನಾವರ



ಶ್ರೀ ಸಿಂಗನಾಥೇಶ್ವರ ದೇವಾಲಯದ ನವರಂಗ
ಕಣಕಟ್ಟೆ



ಶ್ರೀ ಸಿಂಗನಾಥೇಶ್ವರ ದೇವಾಲಯದ
ಬಾಗಿಲುವಾಡ



ಶ್ರೀ ಬಿಳಿಕಲ್ಲು ರಂಗನಾಥಸ್ವಾಮಿ ಮೂಲಸನ್ನಿಧಿ
ಚಿಕ್ಕಹಲಕೂರು



ಶಾಸನಶಿಲ್ಪ ವೀರಗಲ್ಲು,
ಶಂಕರನಹಳ್ಳಿ



ಮೂರ್ತಿಶಿಲ್ಪಗಳು, ಕ್ಯಾತನಹಳ್ಳಿ



ವೀರಗಲ್ಲು, ಚಿಕ್ಕಹಲಕೂರು



ವೀರಗಲ್ಲು ಶಾಸನಗಳು, ಶಂಕರನಹಳ್ಳಿ



ವಿಷ್ಣುವಿನ ಮೂರ್ತಿಶಿಲ್ಪ, ಸಾತಂಗೆರೆ



ಅಸ್ತವ್ಯಸ್ಥವಾಗಿ ಬಿದ್ದಿರುವ ಶಾಸನಗಳು,
ಚಿಕ್ಕಹಲಕೂರು



ಮಹಾಸತಿಕಲ್ಲು
ಜನ್ನಾವರ

